# ನವ ವಿಧಾನ

ದಿ. ಶರಚ್ಚಂದ್ರ ಚಟರ್ಜಿ

ಕನ್ನಡಿಸಿದವರು :
ಶ್ರೀ. ಮಹಾಬಲೇಶ್ವರ ಇಂಕಿಕೊಡ್ಲ



ಸಾಹಿತ್ಯ ಭಂಡಾರ, ಹುಬ್ಬಳ್ಳಿ

ಮೂವತ್ತೆರಡನೆಯ ಪ್ರಕಟನೆ :

# ನವ ವಿಧಾನ

ದಿ. ಶರಚ್ಚಂದ್ರ ಚಟರ್ಜಿ

ಕನ್ನಡಿಸಿದವರು :
ಮಹಾಬಲೇಶ್ವರ ಬಂಕಿಕೊಡ್ಲ




ಎರಡನೆಯ ಮುದ್ರಣ

***

ಸಾಹಿತ್ಯ ಭಂಡಾರ, ಹುಬ್ಬಳ್ಳಿ

ಪ್ರಕಾಶಕರು :
ಮ. ಗೋವಿಂದರಾಯರು
ಸಾಹಿತ್ಯ ಭಂಡಾರ
ಹುಬ್ಬಳ್ಳಿ



ಮೊದಲನೆಯ ಮುದ್ರಣ : ೧೯೪೫
ಎರಡನೆಯ ಮುದ್ರಣ : ೧೯೫೪



ಬೆಲೆ : ೦—೧೨—೦

ಮುದ್ರಕರು :
ನೋಹರೆ ಹಣಮಂತರಾಯರು
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

# ನವವಿಧಾನ

೧

ಈ ಕಥೆಯ ನಾಯಕ ಶೈಲೇಶ್ವರ ಘೋಷಾಲನಿಗೆ ಪತ್ನೀವಿಯೋಗ ವಾಗಿತ್ತು. ಅವನು ಕೆಲದಿನಗಳಲ್ಲಿಯೇ ಇನ್ನೊಂದು ಹೆಣ್ಣು ತಂದುಕೊಳ್ಳುವ ಯೋಚನೆ ಮಾಡಿದ. ಈ ಸುದ್ದಿ ಗೆಳೆಯರ ಕಿವಿಗೆ ಬೀಳಲು ಅವನಿಗೇ ಒಂದು ತರದ ಸಂಕೋಚವೆನಿಸತೊಡಗಿತು. ಇಲ್ಲದಿದ್ದರೆ ಅವನ ಚರಿತ್ರೆಯ ದಿಕ್ಕೇ ಬದಲಾಗುತ್ತಿತ್ತು. ಅದಕ್ಕಾಗಿ ಇಲ್ಲಿಯೇ ಅದನ್ನು ವಿವರಿಸುವೆ.

ಕಲಕತ್ತೆಯ ಸುಪ್ರಸಿದ್ಧ ಕಾಲೇಜೊಂದರಲ್ಲಿ ಶೈಲೇಶ್ವರ ದರ್ಶನ ಶಾಸ್ತ್ರದ ಅಧ್ಯಾಪಕ. ದರ್ಶನ ಶಾಸ್ತ್ರವನ್ನು ಅಭ್ಯಸಿಸಿ ಅವನು ಇಂಗ್ಲೆಂಡಿನ ಒಂದು ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದ. ಅವನಿಗೆ ತಿಂಗಳಿಗೆ ೭-೮ ನೂರು ರೂಪಾಯಿ ಸಂಬಳ; ಮೂವತ್ತೆರಡು ವಯಸ್ಸು. ಒಂಬತ್ತು ವರ್ಷದ ಹುಡುಗನನ್ನು ಹಿಂದೆ ಬಿಟ್ಟು ಅವನ ಹೆಂಡತಿ ಐದು ತಿಂಗಳ ಹಿಂದೆ ಸ್ವರ್ಗಸ್ಥ ಳಾಗಿದ್ದಳು. ಕಲಕತ್ತೆಯ ಪಟಲ್‌ಡಾಂಗಾ ಎಂಬ ಭಾಗದಲ್ಲಿಯೇ ಬಹುದಿನ ಗಳಿಂದಲೂ ವಾಸ್ತವ್ಯ. ಈಗ ಅಲ್ಲಿಯೇ ಒಂದು ಮನೆ ಮಾಡಿದ್ದಾನೆ. ಅಲ್ಲಿ-ರುವವರು ಹುಡುಗ, ಅಡಿಗೆಯವ, ಕೂಲಿ ಎಲ್ಲ ಕೂಡಿ ೮-೯ ಮಂದಿ. ಒಂದು ರೀತಿಯಿಂದ ನೌಕರರದೇ ಅಲ್ಲಿ ಪ್ರಾಬಲ್ಯ. ಶೈಲೇಶ್ವರನಿಗೆ ಮೊದಲು ಮದುವೆ ಯಾಗುವ ಇಚ್ಛೆ ಇರಲಿಲ್ಲ. ಇದು ಸಹಜವೇ ಸರಿ. ಆ ಮೇಲೆ ಆ ಹಂಬಲು ತಲೆದೋರಿತು. ಭವಾನೀಪುರದ ಭೂಪೇಂದ್ರ ಬೆನರ್ಜಿಯ ಸುಂದರಿಯಾದ ಮಗಳು ಮೆಟ್ರಿಕ್ ತೇರ್ಗಡೆಯಾಗಿರುವಳೆಂಬ ಸುದ್ದಿ ಅವನ ಕಿವಿಗೆ ಬಿದ್ದಿದ್ದಿತು. ಮದುವೆಯಾಗುವವರಿರುವಲ್ಲಿ ವಧುಗಳನ್ನು ಕುರಿತು ಚರ್ಚೆಯಾಗುವುದು ಅಸ್ವಾಭಾವಿಕವೇನೂ ಅಲ್ಲ.

ಒಂದು ಸಾಯಂಕಾಲ. ಶೈಲೇಶನ ಗೆಳೆಯರೆಲ್ಲ ಕೂಡಿ ಚಹಾಪಾನ ಮಾಡುತ್ತಿದ್ದರು. ಅವರಲ್ಲಿ ಯಾವುದೋ ಶಾಲೆಯ ಪಂಡಿತನೊಬ್ಬನಿದ್ದ. ಅವನಿಗೆ ಇ ತರರಷ್ಟು ವೇತನವಿರಲಿಲ್ಲ. ಉಳಿದವರಷ್ಟು ಕಲಿತವನೂ ಅಲ್ಲ

ಆದರೆ ಇತರರಿಗಿಂತ ಚಹ ಕುಡಿಯುವುದರಲ್ಲಿ ಮಾತ್ರ ಹಿಂದಿರಲಿಲ್ಲ. ಅವನ ಸ್ವಭಾವ ಸಿಡುಕಿನದು. ಗೆಳೆಯರೆಲ್ಲ ಅವನಿಗೆ "ದಿಗ್ಗಜ" ಎಂದು ಸಂಬೋಧಿಸುತ್ತಿದ್ದರು. ಎಲ್ಲಿ ಯಾವ ಮಾತಾಡಬೇಕೆಂಬ ವಿಚಾರವೇ ಅವನಿಗಿರಲಿಲ್ಲ. "ದಿಗ್ಗಜ"ನಿಗೆ ಇಂಗ್ಲಿಷು ಬರುತ್ತಿರಲಿಲ್ಲ. ಕಲಿತ ಹುಡುಗಿಯರೆಂದರೆ ಅವನಿಗೆ ಜಿಗುಪ್ಸೆ. ಅವನು ನಡುವೆಯೇ ಬಾಯಿ ಹಾಕಿ 'ಒಬ್ಬಳನ್ನು ಹೊರಗೆ ಹಾಕಿದ. ಒಬ್ಬಳನ್ನು ಕೊಂದುಬಿಟ್ಟ. ಈಗ ಮತ್ತೆ ಮದುವೆಯ ಬಯಕೆ. ಗಾರ್ಹಸ್ಥ್ಯ ಜೀವನ ನಡೆಸುವುದಾದರೆ ಉಮೇಶ ಭಟ್ಟಾಚಾರ್ಯನ ಮಗಳನ್ನೇಕೆ ಕರೆತರಬಾರದು? ಆಕೆ ಮಾಡಿದ ಅಪರಾಧವಾದರೂ ಯಾವುದು?' ಎಂದು ಕೇಳಿದ.

ಅಲ್ಲಿ ಕುಳಿತವರಿಗಾರಿಗೂ ಈ ಸುದ್ದಿ ಗೊತ್ತಿರಲಿಲ್ಲ. ಆದರಿಂದ ಅವರಿಗೆಲ್ಲ ಆಶ್ಚರ್ಯವಾಯಿತು. ಅವನೇ ತನ್ನ ಮಾತು ಮುಂದುವರಿಸಿದ—"ಇನ್ನೊಂದು ಲಗ್ನದ ಮಾತೆತ್ತಬೇಡಪ್ಪಾ! ಪಾಪ! ಅವಳನ್ನೇ ಕರೆಸು. ಮೆಟ್ರಿಕ್ಕು ಪಾಸಾಗಿದ್ದಾಳೆ."

'ಅವಳು ಹುಚ್ಚಿಯಂತೆ.'

'ಎಲ್ಲರೂ ಹುಚ್ಚರೇ! ಜನರೆಲ್ಲ ನನಗೂ ಹುಚ್ಚನೆನ್ನುತ್ತಾರೆ. ಅವರ ಹೇಳಿಕೆಯಿಂದ ಆಗುತ್ತಿದ್ದರೆ....' ಸಿಟ್ಟಿನಿಂದ ಮಾತು ಮುಂದುವರಿಸಲಾಗಲಿಲ್ಲ ಅವನಿಂದ.

ಚಹಾ ಪಾರ್ಟಿಗೆ ಸೇರಿದವರೆಲ್ಲ ಬಿದ್ದು ಬಿದ್ದು ನಕ್ಕರು. ನಗೆ ಮುಗಿದೊಡನೆ ಶೈಲೇಶನು ಲಜ್ಜಿತನಾಗಿ ತನ್ನ ಕಥೆ ಹೇಳಿದ— "ನನ್ನ ಜೀವನದಲ್ಲಿ ಇದೊಂದು ದುಃಖಮಯ ಘಟನೆ. ವಿಲಾಯತಿಗೆ ಹೋಗುವ ಮುಂಚೆಯೇ ನನ್ನ ಮದುವೆಯಾಗಿದ್ದಿತು. ನನ್ನ ಮಾವನಿಗೂ ತಂದೆಗೂ ವಿವಾಹ ಕಾಲದಲ್ಲಿ ತಂಟೆ ತಕರಾರು ನಡೆದಿತ್ತು. ಅದಕ್ಕಾಗಿ ತಂದೆಯು ಮನೆಯಲ್ಲಿ ಸೊಸೆಯನ್ನು ಇಟ್ಟುಕೊಳ್ಳಲಿಲ್ಲ. ಲಂಡನ್ನಿನಿಂದ ಹಿಂತಿರುಗಿದ ಮೇಲೆ ನಾನು ಅವಳನ್ನು ಕಂಡಿಲ್ಲ."

'ಅಯ್ಯೋ ದಿಗ್ಗಜ ಮಹಾಶಯರೇ, ಅವಳು ಹುಚ್ಚಿಯಾಗಿರದಿದ್ದರೆ ತವರು ಮನೆಯವರು ಒಮ್ಮೆಯಾದರೂ ಕಳಿಸುತ್ತಿರಲಿಲ್ಲವೇ? ಅವಳು ಇಲ್ಲಿಗೆ ಬಂದಳೆಂದರೆ ನಿಮ್ಮ ಚಹಾಕ್ಕೂ ಸೊನ್ನೆ ಬಿದ್ದೀತು. ಗಂಗಾಜಲ ಸಿಂಪಡಿಸಿ, ಸಗಣಿ ನೀರು ಹಾಕಿ ಹೆಜ್ಜೆಯಿಕ್ಕುವ ಸ್ವಭಾವ ಅವಳದು. ಅವಳು ಬಂದರೆ ಚಹಾ ಸಿಗಲಿಕ್ಕಿಲ್ಲವೆಂದು ಈಗಲೇ ನೋಟೀಸು ಕೊಟ್ಟುಬಿಡುತ್ತೇನೆ.'

ಈ ವಿಷಯದಲ್ಲಿ ಅವರಿಬ್ಬರ ಹೊರತು ಇನ್ನಾರೂ ನಡುವೆ ಬರಲಿಲ್ಲ. ರಾತ್ರಿಯಾದುದರಿಂದ ಅಲ್ಲಲ್ಲಿಯ ಒಂದೆರಡು ಮಾತಾಡಿ ಹೊರಟರು. ದಿನದ ವೇಳೆಗೇ ಹೊರಟಿದ್ದರೂ ದಿನದ ಉಲ್ಲಾಸವಿರಲಿಲ್ಲ ಯಾರಿಗೂ. ಎಲ್ಲರ ಮೋರೆಯ ಮೇಲೂ ವಿಷಾದ ಒಡೆದು ಮೂಡಿದ್ದಿತು.

೨

ತನ್ನ ಮೂರನೆಯ ಮದುವೆಯನ್ನು ಯಾರೂ ಅನುಮೋದಿಸಲಿಲ್ಲವೆಂದು ಶೈಲೇಶನಿಗೆನಿಸಿತು. ಅವರೆಲ್ಲ ಈ ವಿಷಯದಲ್ಲಿ ಸಲಹೆಕೊಡದೆ ಹೋದುದು ತನ್ನ ಅಪಮಾನವೆಂದು ಭಾವಿಸಿದ. ಅವನಿಗೆ ತುಂಬ ನಾಚಿಕೆಯೆನಿಸಿದ್ದರಿಂದ ಯಾರಿಗೂ ಮೋರೆ ತೋರಿಸುವುದೆಂದರೆ ಜೀವದ ಸುತ್ತು ಬಂದಂತಾಗುತ್ತಿತ್ತು.

ಮೊದಲನೇ ಮದುವೆಯಾದಾಗ ಅವನಿಗೆ ಹದಿನೆಂಟು ವರ್ಷ; ಹೆಂಡತಿ ಉಷೆಗೆ ಹನ್ನೊಂದು ವರ್ಷ. ಹುಡುಗಿ ಸುರೂಪಿಯಾದುದರಿಂದ ಕಾಲೀಪದನು ಕಡಿಮೆ ಬೆಲೆಗೇ ತನ್ನ ಮಗನನ್ನು ಮಾರಲು ಒಪ್ಪಿದ್ದ. ಶೈಲೇಶ ವಿಲಾಯತಿಗೆ ತೆರಳಿದ ಮೇಲೆ ಈ ನೆಂಟರಲ್ಲಿ ಕೊಡುಕೊಳ್ಳುವ ವಿಷಯದಲ್ಲಿ ಮನಸ್ತಾಪವಾಯಿತು. ಅವನು ಸೊಸೆಯನ್ನು ಒತ್ತಾಯದಿಂದ ತವರುಮನೆಗೆ ಕಳಿಸಿ ಬಿಟ್ಟ. ವಿಲಾಯತಿಯಿಂದ ಮರಳಿದ ಮೇಲೂ ಮಗನು ಹೆಂಡತಿಯನ್ನು ಕರೆಸಲು ಯತ್ನಿಸಲಿಲ್ಲ. ಆ ಇಚ್ಛೆ ಇದ್ದಂತೆಯೂ ತೋರಲಿಲ್ಲ. ಅತ್ತ ಉಮೇಶ ತರ್ಕಾಲಂಕಾರನೂ ಅಷ್ಟೇ ಅಭಿಮಾನಿ. ತಾನಾಗಿ ಮಗಳನ್ನು ಮಾವನ ಮನೆಗೆ ದೈನ್ಯದಿಂದ ಕಳಿಸಲು ಅವನ ಮನಸ್ಸೊಪ್ಪಲಿಲ್ಲ

ತಂದೆಗೂ ಹಾಗೂ ಮಾವನಿಗೂ ಮನಸ್ತಾಪವಾದ ವಿಷಯ—ಹೆಂಡತಿಯನ್ನು ತವರುಮನೆಗೆ ಅಟ್ಟಿದುದು—ಶೈಲೇಶನಿಗೆ ವಿಲಾಯತಿಯಲ್ಲಿಯೇ ತಿಳಿದಿತ್ತು. ತಾನು ಮನೆಗೆ ಹೋದೊಡನೆಯೇ ಎಲ್ಲ ಸರಿಯಾದೀತೆಂದು ಅವನು ಬಗೆದಿದ್ದ. ಆದರೆ ನಾಲ್ಕು ವರ್ಷ ವಿಲಾಯತಿಯಲ್ಲಿ ಕಳೆದು ಊರಿಗೆ ಬಂದಾಗ ಅವನಲ್ಲಿ ಒಂದು ಬಗೆಯ ಬದಲಾವಣೆ ತಲೆದೋರಿತ್ತು. ಅಲ್ಲದೆ ವಿಲಾಯತಿಯಲ್ಲುಳಿದು ಬಂದ ಸುಶಿಕ್ಷಿತನೊಬ್ಬನಿಗೆ ಕಲಿತ ಮಗಳಿರುವುದನ್ನೂ ವಿದೇಶೀಯ ಶಿಷ್ಟಾಚಾರವನ್ನು ಅವಳು ಅರಿತಿರುವುದನ್ನೂ ಅವನು ಕೇಳಿ ತಿಳಿದಿದ್ದ. ಅವಳೇ ಹೆಂಡತಿಯಾಗುವ ಯೋಗ ಕೂಡಿ ಬಂದುದರಿಂದ ಒಪ್ಪಿಗೆಯಿತ್ತ.

ಈ ಘಟನೆ ನಡೆದು ಬಹಳ ದಿನಗಳಾಗಿವೆ. ಕಾಲೀಪದ ಬಾಬು ಈಗ ಈ ಪ್ರಪಂಚದಲ್ಲಿಲ್ಲ. ಶೈಲೇಶ್ವರನ ಮೊದಲಿನ ಮಾವ ತರ್ಕಾಲಂಕಾರನೂ ಸ್ವರ್ಗವಾಸಿಯಾಗಿದ್ದ. ಇಲ್ಲಿಯ ತನಕ ತರ್ಕಾಲಂಕಾರನ ಮನೆಯ ಸುದ್ದಿ ಅವನ ಕಿವಿಗೆ ಬಿದ್ದಿರಲಿಲ್ಲವೆಂದಲ್ಲ. ಉಷೆ ತನ್ನ ಸಹೋದರರ ಜೊತೆಯಲ್ಲಿದ್ದಾಳೆಂದು ಆತನಿಗೆ ಗೊತ್ತು. ಜಪ, ತಪ, ಪೂಜೆ-ಪುನಸ್ಕಾರಗಳಲ್ಲಿಯೇ ಅವಳ ದಿನವೆಲ್ಲ ಕಳೆದುಹೋಗುತ್ತಿತ್ತು. ಅವಳ ಕರ್ಮಠ ಆಚಾರ ಅವಳ ಅಣ್ಣತಮ್ಮಂದಿರಿಗೂ ಒಗ್ಗುತ್ತಿರಲಿಲ್ಲ. ಹೀಗೆ, ತನ್ನ ಮನಸ್ಸಿಗೆ ಹಿತವಾಗುವಂತಹ ಸುದ್ದಿಯೊಂದೂ ಶೈಲೇಶ್ವರ ಕೇಳಿರಲಿಲ್ಲ. ಆದರೆ ಜನ ಮಾತ್ರ ಉಷೆಯ ಗುಣಗಳನ್ನು ಕುರಿತು ಆಡಿಕೊಳ್ಳುವಂತಿರಲಿಲ್ಲವೆಂಬುದೊಂದೇ ಸಮಾಧಾನ.

ಶೈಲೇಶ ಈ ಎಲ್ಲ ಪರಿಸ್ಥಿತಿಯ ಬಗೆಗೆ ಯೋಚಿಸತೊಡಗಿ, "ಭೂಪೇಂದ್ರನ ವಿದ್ಯಾವಂತ ಕನ್ಯೆಯನ್ನು ಬಿಟ್ಟೆ ಎಂದು ತಿಳಿಯುವಾ. ಅದರಿಂದೇನಾದರೂ ಕೆಲಸವಾದೀತೆ? ಉಷೆ ಕುಸಂಸ್ಕಾರಗಳ ನಡುವೆ ಬೆಳೆದ ೨೫-೨೬ ವರ್ಷದ ಯುವತಿ. ಹಳ್ಳಿಯಲ್ಲಿ ಬೆಳೆದ ಅಶಿಕ್ಷಿತಳು. ಇಂಥವಳನ್ನು ತಂದು ನನ್ನ ಮನೆಯ ವ್ಯವಸ್ಥೆಯನ್ನೊಪ್ಪಿಸಿದರೆ ಮಂಗನ ಕೈಯಲ್ಲಿ ಮಾಣಿಕವಿತ್ತಂತಾಗದೇ? ಸೋಮೇಂದ್ರನ ಪಾಡು ನಾಯಿ ಪಾಡಾದೀತು. ತನ್ನ ಸಂಕಟಕ್ಕೆಲ್ಲ ಅವನ ತಾಯಿಯೇ ಮೂಲವೆಂದು ಬಗೆದು ಉಷೆ ಅವನನ್ನು ಹೀನಾಯವಾಗಿ ನಡೆಸಿಕೊಳ್ಳುವಳು."

ಶೈಲೇಶನ ಭಗಿನಿ ವಿಭಾ. ಅವಳ ಮನೆ ಶ್ಯಾಮ್ ಬಜಾರಿನಲ್ಲಿ. ಅವಳ ಗಂಡ ಬೆರಿಸ್ಟರ್. ಸೋಮೇಂದ್ರನನ್ನು ವಿಭೆಯ ಮನೆಯಲ್ಲಿಟ್ಟರಾಯಿತೆಂದುಕೊಂಡ ಶೈಲೇಶ. ಸೋಮೇಂದ್ರ ಅತ್ತೆಯ ಜೊತೆಗೆ ಆನಂದದಿಂದಿರಲು ಅಡ್ಡಿ ಏನು? ಆದರೆ ಈ ವ್ಯವಸ್ಥೆ ಬಹುಕಾಲ ನಡೆಯದು. ಒಂದೆರಡು ದಿನ ಚಂದ. ಇದು ಯೋಚಿಸುತ್ತ ಹೋದಂತೆ ದಿಗ್ಗಜ ಪಂಡಿತನನ್ನು ಹೊಡೆದುಬಿಡಲೋ ಎನ್ನುವಷ್ಟು ಕ್ರೋಧ ಬಂದುಬಿಟ್ಟಿತು ಅವನಿಗೆ. ಆತನಿಗೆ ಅಷ್ಟೊಂದು ದಿನ ಚಹ ಕೊಟ್ಟೆ–ಬಿಸ್ಕೀಟು ಕೊಟ್ಟೆ. ಆ ಉಪಕಾರವನ್ನೂ ಸ್ಮರಿಸಬಾರದೇ ?

ಶೈಲೇಶ ಸ್ವಭಾವದಿಂದ ಕೆಟ್ಟವನಲ್ಲ. ಆದರೆ ದುರ್ಬಲ ಸ್ವಭಾವದವನು. ತಾನು ಪಡುತ್ತಿರುವ ಸಂಕೋಚಕ್ಕಿಂತ ಪ್ರದರ್ಶಿಸುತ್ತಿರುವ ಸಂಕೋಚ ಹೆಚ್ಚು. ಕಲಿತವನೆಂಬ ಹೆಮ್ಮೆಯೂ ಇತ್ತು ಅವನಿಗೆ. ಅಲ್ಲದೆ, ಯಾರೊಡನೆಯೂ ಅನ್ಯಾಯವಾಗಿ ನಡೆದುಕೊಂಡಿಲ್ಲವಲ್ಲ ಎಂಬ ಗರ್ವ ಬೇರೆ. ಆದರೆ ಇಂದಿನ

ಉಷೆಯನ್ನು ಕುರಿತ ಚರ್ಚೆಯಿಂದ ಗೆಳೆಯರ ಮುಂದೆ ಅಲ್ಪನಾಗಬೇಕಾಯಿತಲ್ಲ ಎಂಬ ದುಃಖ. ಇದು ಅವನ ಅಭಿಮಾನಕ್ಕೆ ಪೆಟ್ಟು ಕೊಟ್ಟಿತು.

ಆ ರಾತ್ರಿ ಶೈಲೇಶನಿಗೆ ನಿದ್ದೆಯೇ ಬರಲಿಲ್ಲ. ಮಂಚದ ಮೇಲೆ ಬಿದ್ದುಕೊಂಡು ಇದೇ ವಿಷಯವನ್ನು ಕುರಿತು ನಾನಾ ಬಗೆಯಾಗಿ ಯೋಚಿಸತೊಡಗಿದ. ಕೊನೆಗೆ ಬೆಳಗಾಗುವ ಹೊತ್ತಿಗೆ ಅವನಿಗೊಂದು ಸುಲಭೋಪಾಯ ತೋಚಿತು. 'ಉಷೆಯನ್ನು ಕರೆಯಲು ಯಾರನ್ನಾದರೂ ಕಳಿಸಿದರಾಯಿತು. ಅವಳೆಂದೂ ಬರಲಿಕ್ಕಿಲ್ಲ. ಬಂದರೂ ಇಲ್ಲಿ ಇರಲಿಕ್ಕಿಲ್ಲ—ಏಕೆಂದರೆ ಇದು ಮ್ಲೇಂಛರ ಮನೆ. ಇದರಿಂದ ನನ್ನದೇನೂ ತಪ್ಪಿಲ್ಲವೆಂದು ಜನರು ತಿಳಿಯುವರು. ಮೂರು ನಾಲ್ಕು ದಿನದ ಮಾತಿಗೆ ಸೋಮೇಂದ್ರನನ್ನು ಅತ್ತೆಯ ಮನೆಗೆ ಕಳುಹಿಸಿ ಕೊಡುವೆ. ಅಷ್ಟು ದಿನ ನಾನೂ ಹೇಗಾದರೂ ಮಾಡಿ ಕಳೆಯುವೆ. ಎಂದರೆ ಈ ತೊಂದರೆಯು ನಿವಾರಣೆಯಾದೀತು.' ಇಂತಹ ಸುಲಭೋಪಾಯ ಹುಡುಕಲು ಇಷ್ಟು ಹೊತ್ತು ತಗಲಿದುದನ್ನು ಕಂಡು ತಾನೇ ಆಶ್ಚರ್ಯಪಟ್ಟುಕೊಂಡ ಅವನು. ಕೊನೆಗೂ ಇದೇ ಯೋಗ್ಯವೆಂದು ತೀರ್ಮಾನಿಸಿದ.

ಶೈಲೇಶ ಏಳು ದಿನದ ರಜೆ ತೆಗೆದುಕೊಂಡ. ಪ್ರಯಾಗಿನಲ್ಲಿ ಅವನ ಬಾಲ್ಯದ ಗೆಳೆಯನೊಬ್ಬನಿದ್ದ. ತಾನು ಪ್ರಯಾಗಿಗೆ ಬರುತ್ತೇನೆಂದು ತಂತಿಯಿಂದ ಅವನಿಗೆ ತಿಳಿಸಿದ. ಆ ಮೇಲೆ ತಂಗಿ ವಿಭೆಗೆ ಒಂದು ಕಾಗದ ಬರೆದ. ಅದರಲ್ಲಿ 'ಉಷೆಯನ್ನು ಕರೆಯಲು ನಂದಿಗ್ರಾಮಕ್ಕೆ ಜನ ಕಳಿಸಿದ್ದೇನೆ. ಅವಳು ಬಂದು ಎರಡು ದಿನದ ಮೇಲೆ ನೀನು ಬಂದು ಸೋಮೇಂದ್ರನನ್ನು ಕರೆದುಕೊಂಡು ಹೋಗು. ನಾನು ಪ್ರಯಾಗಿಗೆ ಹೋಗುತ್ತಿದ್ದೇನೆ. ಅಲ್ಲಿಂದ ಬರಲು ನನಗೆ ಒಂದು ವಾರ ಬೇಕಾದೀತು' ಎಂದು ಇತ್ತು.

ಶೈಲೇಶನಿಗೊಬ್ಬ ಬಳಗದ ಬಂಧುವಿದ್ದ. ಇವರು ಹೇಳಿದಂತೆ ಅವನು ಕೇಳುತ್ತಿದ್ದ. ಅವನು ಒಂದು ಫರ್ಮಿನಲ್ಲಿ ಕೆಲಸಕ್ಕಿದ್ದ. "ನೀನು ನಾಳೆ ನಂದಿಗ್ರಾಮಕ್ಕೆ ಹೋಗಿ ನಿನ್ನ ಅತ್ತಿಗೆಯನ್ನು ಕರೆದುಕೊಂಡು ಬಾ" ಎಂದು ಶೈಲೇಶ ಅವನಿಗೆ ಹೇಳಿದ.

ಭೂತನಾಥನಿಗೆ ಆಶ್ಚರ್ಯವಾಯಿತು—"ಈಗ ಇನ್ನೆಲ್ಲಿಯ ಅತ್ತಿಗೆಯೋ ಅಣ್ಣಾ ?"

"ನೀನು ದಿಬ್ಬಣದ ಸಂಗಡ ಹೋಗಿದ್ದೆಯಲ್ಲಾ ಉಮೇಶ ಭಟ್ಟಾಚಾರ್ಯರ ಮನೆಗೆ ?"

" ಹೋದುದೇನೋ ನಿಜ. ಆದರೆ ನನುಗೆ ಯಾರೊಬ್ಬರ ಪರಿಚಯವೂ ಇಲ್ಲ. ಎಂದ ಬಳಿಕ ಅತ್ತಿಗೆ ನನ್ನ ಜೊತೆಗೆ ಹೇಗೆ ಬಂದಾಳು ? "

" ಬಂದರೆ ಬರುತ್ತಾಳೆ, ಇಲ್ಲವಾದರೆ ಇಲ್ಲ. ಅದೆಲ್ಲ ನಿನಗೇಕೆ? ಸಂಗಡ ಆಳನ್ನೂ ದಾಸಿಯನ್ನೂ ಕರೆದುಕೊಂಡು ಹೋಗು. ಅವಳು ಬರುವುದಿಲ್ಲ ವೆಂದರೆ ಕೂಡಲೇ ಹೊರಟು ಬಾ. "

" ಒಳ್ಳೇದು, ಹೋಗುವುದಂತೂ ಹೋಗುವೆ. ಹೊಡೆದಾಟವೊಂದು ಆಗದಿದ್ದರೆ ಸಾಕು. "

ಶೈಲೇಶ ಆವನಿಗೆ ಕೊಂಚ ಹಣವನ್ನೂ ಒಂದು ಬೀಗದ ಕೈಯನ್ನೂ ಕೊಟ್ಟು, " ಇಂದು ರಾತ್ರಿಯ ಟ್ರೇನಿನಿಂದ ನಾನು ಪ್ರಯಾಗಿಗೆ ಹೋಗುವೆ. ಬರುವುದು ಏಳು ದಿನದ ನಂತರ. ಅವಳು ಬಂದರೆ ಈ ಬೀಗ ಕೊಡು. ಆ ಕಪಾಟು ತೋರಿಸು. ಈ ಹಣದಿಂದ ಒಂದು ತಿಂಗಳು ದೂಡಿದರಾಯಿತು " ಎಂದ.

" ಈ ಯೋಚನೆ ಈಗ ಎಲ್ಲಿಂದ ಬಂತು ಅಣ್ಣಾ ? ಇದೊಂದು ಕುತ್ತನ್ನು ಮೈಮೇಲೆ ಬರಮಾಡಿಕೊಳ್ಳುತ್ತಿಲ್ಲವಷ್ಟೇ?"

ಶೈಲೇಶ ಕೊಂಚ ಯೋಚನಾಮಗ್ನನಾದ. ಆ ಮೇಲೆ ನಿಟ್ಟುಸಿರಿಟ್ಟು " ಅವಳು ನಿಶ್ಚಯವಾಗಿಯೂ ಬರುವುದಿಲ್ಲ. ಆದರೆ ಧರ್ಮದ ಹಾಗೂ ಸಮಾಜದ ಎದುರು ಏನಾದರೂ ನಟಿಸಬೇಕಲ್ಲವೇ ? ಶ್ಯಾಮ್ ಬಜಾರಿಗೆ ಹೋಗಿ ಸೋಮೇಂದ್ರನನ್ನು ಕರೆದುಕೊಂಡು ಹೋಗಲು ವಿಭೆಗಷ್ಟು ತಿಳಿಸಿ ಬಿಡು."

ರಾತ್ರಿ ಪಂಜಾಬ್ ಮೇಲಿನಿಂದ ಶೈಲೇಶ್ವರ ಪ್ರಯಾಗಿಗೆ ಪ್ರಯಾಣ ಬೆಳೆಸಿದ.

## ೩

ಈ ಘಟನೆ ನಡೆದು ಕೆಲವು ದಿನ ಉರುಳಿವೆ. ಒಂದು ಮಧ್ಯಾನ್ಹ ಒಂದು ಮೋಟರ್ ಬಂದು ಬಾಗಿಲುಮುಂದೆ ನಿಂತಿತು. ಒಂದೆರಡು ನಿಮಿಷಗಳಲ್ಲಿ ೨೨-೨೩ ವಯಸ್ಸಿನ ಮಹಿಳೆಯೋರ್ವಳು ಮನೆಯನ್ನು ಹೊಕ್ಕಳು. ಆಕೆ ನೇರವಾಗಿ ದಿವಾಣ್‌ಖಾನೆಗೆ ತಲುಪಿದಳು. ಅಲ್ಲಿ ಸೋಮೇಂದ್ರ ತನ್ನ ಹೊಸ

ತಾಯಿಗೆ ಅನೇಕ ಚಿತ್ರಗಳನ್ನು ತೋರಿಸುತ್ತಿದ್ದ. ಅವನ ಮೋರೆಯ ಮೇಲೆ ಗೆಲುವಿನ ನವಿಲು ಲಾಸ್ಯವಾಡುತ್ತಿತ್ತು. ಅವನು ಬಂದವಳ ಪರಿಚಯ ಮಾಡಿಸುತ್ತ "ಅಮ್ಮಾ, ಈಕೆಯೇ ನನ್ನ ಅತ್ತೆ" ಎಂದ.

ಉಷೆ ಎದ್ದುನಿಂತಳು. ಅವಳು ಸಾಧಾರಣ ತರಗತಿಯ ಕೆಂಪು ಅಂಚಿನ ಸೀರೆ ಉಟ್ಟಿದ್ದಳು. ಕೈ-ಕಿವಿಗಳಲ್ಲೆಲ್ಲ ಅಲ್ಪ ಬೆಲೆಯ ಒಂದೆರಡು ಆಭರಣಗಳಿದ್ದವು. ಆ ನಿರಾಭರಣಸುಂದರಿಯನ್ನು ಕಂಡು ವಿಭೆ ಚಕಿತಳಾದಳು.

ಉಷೆಯೇ ಮೊದಲು ಮಾತಾಡಲು ಆರಂಭಿಸಿದಳು—"ಮಗೂ, ಅತ್ತೆಗೆ ನಮಸ್ಕರಿಸಲಿಲ್ಲವಲ್ಲ!"

ಸೋಮೇಂದ್ರ ಈ ಶಿಷ್ಟಾಚಾರದ ಶಿಕ್ಷಣ ಪಡೆಯುತ್ತಿದ್ದುದು ಇತ್ತೀಚೆ ಮಾತ್ರ. ಅವನು ಲಗುಬಗೆಯಿಂದ ಹೇಗೆ ಹೇಗೋ ಸಂಪ್ರದಾಯದ ಶಾಸ್ತ್ರ ಮುಗಿಸಿದ. "ಅಮ್ಮಾ, ನಿಂತಿರುವಿರೇಕೆ? ಕುಳಿತುಕೊಳ್ಳಿ" ಎಂದಳು ಉಷೆ.

"ನೀವು ಯಾವಾಗ ಬಂದಿರಿ?"

"ನಾನು ಬಂದದ್ದು ಸೋಮವಾರ. ಇಂದು ಬುಧವಾರ. ಇಂದಿಗೆ ಮೂರು ದಿನವಾಯಿತು. ಕುಳಿತುಕೊಳ್ಳಿ, ಎಷ್ಟು ಹೊತ್ತಿನ ತನಕ ನೀವು ಹೀಗೇ ನಿಂತಿರುವುದು?"

ವಿಭೆ ಬಂದುದು ಉಷೆಯ ಪರಿಚಯ ಬೆಳೆಸಲಿಕ್ಕಲ್ಲ. ಬರುವಾಗಲೇ ಜೊತೆಗೆ ಉದ್ಧಾಮತೆಯನ್ನೂ ತಂದಿದ್ದಳು—"ನನಗೆ ಕುಳಿತುಕೊಳ್ಳುವಷ್ಟು ಅವಕಾಶವಿಲ್ಲ, ತುಂಬಾ ಕೆಲಸವಿದೆ. ಸೋಮೇಂದ್ರನನ್ನು ಕರೆದುಕೊಂಡು ಹೋಗೋಣವೆಂದು ಅವಸರದಿಂದ ಬಂದೆ."

"ಇಲ್ಲಿ ನಾನೊಬ್ಬಳೇ ಹೇಗೆ ಇರಲಿ ಅತ್ತಿಗೆ? ನಮ್ಮಣ್ಣಂದಿರ ಮನೆಯಲ್ಲಿ ಹುಟ್ಟಿದ ಮಕ್ಕಳೆಲ್ಲ ನನ್ನ ಕೈಯಲ್ಲೇ ಬೆಳೆದು ದೊಡ್ಡವರಾದರು. ಜೊತೆಗೆ ಯಾರೂ ಇರದಿದ್ದರೆ, ನನಗೆ ಬದುಕೇ ಹೊರೆಯಾಗುತ್ತದೆ" ಎಂದು ಉಷೆ ಮೃದುವಾಗಿ ನಕ್ಕಳು.

ವಿಭೆ ತನ್ನ ಕಾಠಿಣ್ಯ ಬಿಡಲಿಲ್ಲ. ಅವಳು ಸೋಮೇಂದ್ರನನ್ನು ಉದ್ದೇಶಿಸಿ ಮಾತನಾಡಿದಳು—"ನಿಮ್ಮ ತಂದೆ ನಿನ್ನನ್ನು ಕರೆದುಕೊಂಡು ಹೋಗಲು ನನಗೆ ಹೇಳಿದ್ದಾನೆ. ಸೋಮೇಂದ್ರ, ಇಲ್ಲಿ ನಿಂತು ನಿನ್ನೊಡನೆ ವೇಳೆ ಹಾಳು ಮಾಡಲು ನನಗೆ ಸಮಯವಿಲ್ಲ. ಹೋಗು, ಬೇಗ ಬಟ್ಟೆ ಹಾಕಿಕೊ. ನನಗೆ ಈಗ ತಾನೇ ಹೊಸ ಮಾರ್ಕೆಟಿಗೆ ಹೋಗುವುದಿದೆ."

ಸೋಮೇಂದ್ರನಿಗೆ ಏನು ಮಾಡಲಿಕ್ಕೂ ತೋಚಲಿಲ್ಲ. ಅವನು ತಾಯಿಯನ್ನೂ ಬಿಡಲಾರ, ಅತ್ತೆಯನ್ನೂ ಬಿಡಲಾರ—"ಅತ್ತೇ, ಅಮ್ಮ ಹೋಗುವುದು ಬೇಡ ಎನ್ನುತ್ತಿದ್ದಾಳೆ."

ಉಷೆಗೆ ಅವನ ಉಭಯ ಸಂಕಟ ವಿದಿತವಾಯಿತು—"ಮಗೂ, ನೀನು ಹೋಗುವುದು ಬೇಡವೆಂದು ನನ್ನ ಅಭಿಪ್ರಾಯವಲ್ಲ. ನೀನು ಹೋದರೆ ನನಗೊಬ್ಬಳಿಗೇ ಬೇಸರವಾಗುತ್ತದೆಂದು ಮಾತ್ರ ಹೇಳಿದೆ."

ಅವನು ಮರುಮಾತಾಡದೆ ಉಷೆಯ ಬಳಿ ಹೋಗಿ ಅವಳ ಸೆರಗು ಹಿಡಿದು ನಿಂತುಕೊಂಡ. ಅವನ ತಲೆಯನ್ನು ನೇವರಿಸುತ್ತ ಉಷೆಯೆ ಅತ್ತಿಗೆಗೆ "ಅವನಿಗೆ ಹೋಗುವ ಮನಸ್ಸಿಲ್ಲ" ಎಂದಳು.

ಸಿಟ್ಟು ಲಜ್ಜೆಗಳಿಂದ ವಿಭೆಯ ಮೋರೆ ಕಪ್ಪಿಟ್ಟಿತು. ಅವಳು ಓದಿದವಳೆಂಬುದು ನಿಜ. ಸುಧಾರಿಸಿದ ಸಭ್ಯ ಸ್ತ್ರೀಯರೆನ್ನುವವರಿಗಿಂತ ಅವಳು ಹೆಚ್ಚು ಕಲಿತಿದ್ದಳು. ಆದರೂ ಅವಳು ತಾಳ್ಮೆಗೆಟ್ಟಳು— "ಅದೆಲ್ಲ ಇರಲಿ. ಅವನು ಬರಲೇಬೇಕು. ನೀವು ಹೀಗೆ ಪುಸಲಾಯಿಸದಿದ್ದರೆ ಅವನು ತಂದೆಯ ಮಾತನ್ನೆಂದೂ ಮೀರುತ್ತಿರಲಿಲ್ಲ" ಎಂದಳು ಅವಳು.

ಇಂತಹ ಚುಚ್ಚುಮಾತಿಗೂ ಉಷೆ ವಿಚಲಿತಳಾಗಲಿಲ್ಲ. ತುಟಿಯೇನೋ ಒಮ್ಮೆ ಅದುರಿತು ಹೊರತು, ಅವಳ ಮುಖದಲ್ಲಾವ ಬದಲಾವಣೆಯೂ ತೋರಲಿಲ್ಲ.

"ನಾವು ಇಷ್ಟು ದೊಡ್ಡವರಾಗಿದ್ದರೂ ನಮ್ಮ ಕರ್ತವ್ಯಕರ್ಮ–ಪತಿಯಾಜ್ಞಾಪಾಲನೆ–ಮಾಡುವುದಿಲ್ಲ. ಸೋಮೇಂದ್ರನಂತೂ ಹಸುಳ. ಅವನಿಗೆ ತಿಳಿವಳಿಕೆಯಾದರೂ ಎಷ್ಟು? ಅಲ್ಲದೆ ಪುಸಲಾಯಿಸಿದ ಆರೋಪ ನನ್ನ ಮೇಲೆ ಹೊರಿಸುತ್ತೀರಿ. ಅದರ ಬಗೆಗೆ ನನ್ನ ನಮ್ರ ಬಿನ್ನಹವಿಷ್ಟು : ನನ್ನ ಕೈಯಿಂದ ಎಷ್ಟೋ ಮಕ್ಕಳು ದೊಡ್ಡವರಾಗಿದ್ದಾರೆ. ಆದುದರಿಂದ ಈ ಮಗು ನನ್ನ ಜೊತೆಯಲ್ಲಿದ್ದರೂ ನೀವೇನು ಹೆಚ್ಚು ಯೋಚನೆ ಮಾಡಬೇಕಾಗಿಲ್ಲ."

"ಹಾಗೇ ಆಗಲಿ. ನಾನು ಅಣ್ಣನಿಗೆ ಇಂದೇ ಕಾಗದ ಹಾಕಿಬಿಡುತ್ತೇನೆ."

"ಆಗಲಿ. ಅಷ್ಟೇ ಅಲ್ಲದೆ, ಪ್ರಯಾಗಿನಲ್ಲಿ ಕುಳಿತು ಮಾಡಿದ ಆಜ್ಞೆಗಿಂತಲೂ ಕಲಕತ್ತೆಯಿಂದ ಮಾಡಿದ ಆಜ್ಞೆಯೇ ಹೆಚ್ಚು ಮಹತ್ವದ್ದೆಂದು ನಾನು ಹೇಳುತ್ತೇನೆಂದೂ ಬರೆದುಬಿಡು. ಆದರೆ ಅತ್ತಿಗೆ, ಸಂಬಂಧದಿಂದಲೂ ವಯಸ್ಸಿನಿಂದಲೂ ನಿನಗಿಂತ ನಾನು ಹಿರಿಯಳೆಂಬುದನ್ನು ಮರೆಯಬೇಡ.

ಆದ್ದರಿಂದ ನನ್ನ ಮಾತಿಗಾಗಿ ರೇಗುವ ಕಾರಣವಿಲ್ಲ. ಸಿಟ್ಟಿನಿಂದ ನೀನು ಕುಳಿತುಕೊಳ್ಳಲಿಕ್ಕೆ ಕೂಡ ಒಪ್ಪಲಿಲ್ಲ. ಆದರೆ, ಒಂದಲ್ಲ ಒಂದು ದಿನ ಇದೇ ಅತ್ತಿಗೆಯ ಜೊತೆಯಲ್ಲಿ ಬಂದು ಕುಳಿತುಕೊಳ್ಳಲು ನೀನೇ ಮನಸ್ಸು ಮಾಡುವೆ ಯೆಂದು ಆತ್ಮವಿಶ್ವಾಸದಿಂದ ಹೇಳುತ್ತೇನೆ. ''

" ಆಗಲಿ, ಇಂದು ಬಿಡುವಿಲ್ಲ. ನಮಸ್ಕಾರ " ಎಂದು ವಿಭೆ ತೀವ್ರವಾಗಿ ಹೆಜ್ಜೆ ಹಾಕುತ್ತ ಹೊರಟುಹೋದಳು. ಗಾಡಿಯಲ್ಲಿ ಕುಳಿತು ಮೇಲೆ ನೋಡಿದಾಗ ಸೋಮೇಂದ್ರನ ಜೊತೆಗೆ ಮಾಳಿಗೆಯ ಕಟಾಂಜನವನ್ನು ಹಿಡಿದು ನಿಶ್ಚಲ ಪ್ರತಿಮೆಯಂತೆ ನಿಂತು ತನ್ನನ್ನೇ ದಿಟ್ಟಿಸುತ್ತಿದ್ದ ಉಷೆಯು ಅವಳಕಣ್ಣಿಗೆ ಬಿದ್ದಳು.

೪

ಶೈಲೇಶ್ವರ ಒಂದು ವಾರ ರಜೆಯನ್ನು ಪಡೆದು ಹೋಗಿದ್ದರೂ ಪ್ರಯಾಗಿ ನಲ್ಲಿ ಎರಡು ವಾರ ಕಳೆದ. ಆ ಮೇಲೆ ಒಂದು ದಿನ ಅಕಸ್ಮಾತ್ತಾಗಿ ಮನೆಗೆ ಬಂದ. ಮುಂದಿನ ಅಂಗಣದಲ್ಲಿ ಸೋಮೇಂದ್ರ ಕುಳಿತಿದ್ದ. ಬಿದಿರಿನ ಕೆಲವು ಕಡ್ಡಿ, ಬಣ್ಣಬಣ್ಣದ ಕಾಗದ, ಅಂಬು ತೆಗೆದುಕೊಂಡು ಕೆಲಸದಲ್ಲಿ ತನ್ಮಯ ನಾಗಿದ್ದ. ತಂದೆ ಬಂದುದನ್ನು ಅವನು ನೋಡಿರಲಿಲ್ಲ. ನೋಡಿದಾಗ ನಾಚಿ ಬೇಗಬೇಗನೆ ಎದ್ದು ನಮಸ್ಕರಿಸಿದ. ಗುರುಹಿರಿಯರಿಗೆ ಯಾಕೆ ನಮಸ್ಕರಿಸ ಬೇಕೆಂಬುದು ಇನ್ನೂ ಅವಗತವಾಗಿರಲಿಲ್ಲವೆಂಬುದನ್ನು ಅವನ ಮುಖ ಮುದ್ರೆಯೇ ಹೇಳುತ್ತಿತ್ತು. ಆ ನಮಸ್ಕಾರದಿಂದ ಶೈಲೇಂದ್ರನಿಗೆ ಆಶ್ಚರ್ಯ ವಾಯಿತು—" ಸೋಮೇಂದ್ರ, ಇದೆಲ್ಲ ಏನಿದು ? ''

" ಅಪ್ಪಾ, ನೀನೇ ಹೇಳು ನೋಡುವಾ ? "

"ನನಗೇನು ಗೊತ್ತು ? ''

ತಂದೆಗೆ ತಿಳಿಯದೆಂದು ಮಗನು ಚಪ್ಪಾಳೆಯಿಕ್ಕಿ ನಗತೊಡಗಿದ; ಮತ್ತು ಸಂತೋಷದಿಂದ " ಆಕಾಶದೀಪ " ಎಂದ.

" ಆಕಾಶದೀಪ ! ಅದರ ಉಪಯೋಗವೇನು ? "

ಆಕಾಶದೀಪದ ಅದ್ಭುತ ಪ್ರಯೋಗವನ್ನು ಅವನು ಇಂದೇ ತಿಳಿದು ಕೊಂಡಿದ್ದ. " ಇಂದು ಸಂಕ್ರಾಂತಿ ಅಪ್ಪಾ. ಸಾಯಂಕಾಲ ಎತ್ತರವಾದ ಗಳಕ್ಕೆ

ಇದನ್ನು ತೂಗುಹಾಕಬೇಕು. ಇದರಿಂದ ಸ್ವರ್ಗಸ್ಥರಾದ ಹಿರಿಯರಿಗೆ ಬೆಳಕು ದೊರೆಯುತ್ತದೆ. ಅವರು ನಮ್ಮನ್ನು ಹರಸುತ್ತಾರೆ ಎಂದು ಅಮ್ಮ ಹೇಳಿದಳು. ”

ಶೈಲೇಶ್ವರನಿಗೆ ಸಿಟ್ಟು ಬಂದಿತು. ಅವನು ಎಲ್ಲವನ್ನೂ ಕಾಲಿನಿಂದೊದೆದು ಹಾಳುಮಾಡಿಬಿಟ್ಟ—“ ಹೌದು, ಹೌದು ! ಆಶೀರ್ವಾದವಂತೆ ಆಶೀರ್ವಾದ ! ನೀನು ಪ್ರಪಂಚದ ಕುಸಂಸ್ಕಾರಗಳನ್ನೆಲ್ಲ ಕಲಿಯುತ್ತಿರುವಂತೆ ಕಾಣುತ್ತಿದೆ. ಹೋಗೋ, ಪುಸ್ತಕ ತೆಗೆದುಕೊಂಡು ಓದು, ಹೋಗು. ”

ಆಕಾಶದೀಪ ಹೀಗೆ ಹಾಳಾದುದನ್ನು ಕಂಡು ಸೋಮೇಂದ್ರನಿಗೆ ಅಳು ಬಂದಿತು. ಆಗ ಮಾಳಿಗೆಯ ಮೇಲಿನಿಂದ ಒಬ್ಬರು ಮಧುರವಾಗಿ “ ಮಗೂ, ಪೇಟೆಯಿಂದ ನಾಳೆ ನಿನಗೊಂದು ಸೊಗಸಾದ ಆಕಾಶದೀಪ ಕೊಂಡುಕೊಡುವೆ. ಅಳಬೇಡ, ಇಲ್ಲಿ ಬಾ ” ಎಂದು ಕರೆದರು.

ಸೋಮೇಂದ್ರ ಕಣ್ಣೊಜ್ಜುತ್ತಲೇ ಮೇಲೆ ಹೋದ. ಶೈಲೇಶ ಬೇರೆ ಎಲ್ಲಿಯೂ ನೋಡದೆ ನೇರವಾಗಿ ತನ್ನ ಓದುವ ಕೋಣೆಯಲ್ಲಿ ಹೋಗಿ ಕುಳಿತ. ತುಸು ಹೊತ್ತಿನಲ್ಲಿಯೇ ಠಣ್, ಠಣ್ ಎಂದು ಗಂಟೆ ಬಾರಿಸಿದ. ಆದರೆ ಯಾರೂ ‘ ಓ ’ಗೊಡಲಿಲ್ಲ.

“ ಅಬ್ದುಲ್ ? ”

ಅಬ್ದುಲ್ ಬರಲಿಲ್ಲ.

“ ಗಿರಿಧಾರೀ ? ಏ ಗಿರಿಧಾರೀ ? ”

ಗಿರಿಧಾರಿಯ ಬದಲು ಗೋಕುಲನೆಂಬ ಬಂಗಾಲಿ ನೌಕರನೊಬ್ಬ ಇಣಿಕಿ —“ ದನಿಯುರೇ ? ” ಎಂದ. ಶೈಲೇಶನಿಗೆ ಸಂತಾಪವಾಗಿತ್ತು. “ ದನಿ ? ಎಲ್ಲ ಫಟಿಂಗರು ಸತ್ತುಹೋದರೇ ? ”

“ ಇಲ್ಲ, ಒಡೆಯ ? ”

“ ಹಾಗಾದರೆ ಅಬ್ದುಲ್ಲನೆಲ್ಲಿ ? ”

“ ಅಮ್ಮಾವ್ರು ಅವನನ್ನು ಕೆಲಸದಿಂದ ತೆಗೆದುಹಾಕಿದರು. ಅವನು ತನ್ನ ಮನೆಗೆ ಹೋದ. ”

“ ಅಬ್ದುಲ್ಲನನ್ನು ತೆಗೆದುಹಾಕಿದರೇ ? ಅವನು ಮನೆಗೆ ಹೋದನೇ ? ಹಾಗಾದರೆ ಗಿರಿಧಾರಿಯೆಲ್ಲಿ ? ”

“ ಅವನಿಗೂ ಮನೆಗೆ ಅಪ್ಪಣೆ ಕೊಟ್ಟರು. ”

ಗೋಕುಲನ ಮಾತು ಕೇಳಿ ಶೈಲೇಶ ಚಕಿತನಾದ— “ ಇನ್ನೂ ಯಾರಾ

ದರೂ ಉಳಿದಿದ್ದಾರೋ ಅಥವಾ ಎಲ್ಲರ ಗತಿಯೂ ಇದೇ ಆಗಿದೆಯೋ ? "

ಗೋಕುಲ ಗೋಣು ಅಲ್ಲಾಡಿಸಿ "ಇಲ್ಲ, ಎಲ್ಲರೂ ಇದ್ದಾರೆ" ಎಂದ.

"ಉಳಿದವರೂ ಇರುವುದೇಕೆ ? ಹೋಗು, ಹೊರಬೀಳು ಇಲ್ಲಿಂದ."

ಶೈಲೇಶ್ವರನು ತನ್ನ ಕೈಯಿಂದಲೇ ಬೂಟು ಕಳಚಿದ. ಕೋಟು ತೆಗೆದು ಮೇಜಿನ ಮೇಲೆಯೇ ಇಟ್ಟ. ಹೊಸ ಪಂಚೆ ಉಟ್ಟು ಪಾಯಿಜಾಮೆ ಕಳೆದು ಹತ್ತಿರದ ಕುರ್ಚಿಯ ಮೇಲೆ ಒಗೆದ. ತಾನು ಕುರ್ಚಿಯ ಮೇಲೆ ಕುಳಿತುಕೊಳ್ಳದೆ ನೆಲದ ಮೇಲೆಯೇ ಒರಗಿದ. ನೆಕ್‌ಟೈ, ಕೊಲರ್‌ಗಳನ್ನು ಒಂದೊಂದು ಬದಿಗೆ ಒಗೆದ. ಕೊನೆಗೆ ಅಲ್ಲಿಂದ ಎದ್ದು ಕುರ್ಚಿಯ ಮೇಲೆ ಕುಳಿತು ಮುಂದೆ ನೋಡಿದಾಗ ಮೇಜಿನ ಮೇಲೊಂದು ಪಟ್ಟಿ ಕಾಣಿಸಿತು. ಅದು ಚನ್ನಾಗಿ ತಯಾರಿಸಿದ್ದಾಗಿತ್ತು. ಅದರ ಮೇಲೆ 'ಮನೆಯ ಜಮಾ ಖರ್ಚಿನ ಪಟ್ಟಿ' ಎಂದು ಬರೆದಿತ್ತು.

ಶೈಲೇಶ ಅದನ್ನು ನೋಡಿದ. ಹೆಂಗಸರು ಬರೆದಂತಿತ್ತು. ಅಂಗಡಿಯಿಂದ ತಂದ ಪ್ರತಿಯೊಂದು ಸಾಮಾನಿನ ಬೆಲೆಯನ್ನೂ ಸ್ಪಷ್ಟವಾಗಿ ಕಾಣಿಸಿತ್ತು. ಕೆಲ ಹೊತ್ತಿನಲ್ಲಿ ಒಬ್ಬ ಹೆಂಗುಸು ಸಾವಕಾಶವಾಗಿ ಪ್ರವೇಶಿಸಿದಳು. ಈಕೆ ಯಾರೆಂದು ಗೊತ್ತಾಗದಿದ್ದರೂ ಊಳಿಗದವಳಲ್ಲವೆಂದು ಮಾತ್ರ ಊಹಿಸಿದ. ಕೂಡಲೇ ಲೆಕ್ಕದ ಪಟ್ಟಿಯನ್ನು ತನ್ಮಯತೆಯಿಂದ ಪರಿಶೀಲಿಸತೊಡಗಿದ. ಇತ್ತ ಬಂದ ಮುಹಿಳೆ ಅವನ ಕಾಲ ಬಳಿ ತಲೆ ಇಟ್ಟು ನಮಸ್ಕರಿಸಿದಳು. ಹಾಗೆಯೇ ಎದ್ದು "ಈಗ ಚಹಾ ಕುಡಿಯುತ್ತೀರಾ ? ಚಹಾ ಕುಡಿದ ಮೇಲೆ ಅನ್ನ ಸೇರುವುದಿಲ್ಲ" ಎಂದಳು.

"ನನಗೆ ಊಟ ಬೇಡ."

"ಹಾಗೇ ಆಗಲಿ. ಊಟ ಮಾಡದಿದ್ದರೆ ಬೇಡ. ಕೈಕಾಲನ್ನಾದರೂ ತೊಳೆದು ಮೇಲೆ ಬನ್ನಿ. ಇಂತಹ ಅವೇಳೆಯಲ್ಲಿ ಸ್ನಾನಮಾಡದಿದ್ದರೂ ನಡೆದೀತು. ಉಪಾಹಾರವಿದೆ. ಕುಮುದೆಗೆ ಸ್ವಲ್ಪ ಶರಬತ್ತು ತಯಾರಿಸಲು ಹೇಳಿದ್ದೇನೆ."

"ಈಗ ಇರಲಿ."

"ಅಯ್ಯೋ, ನಾನೇನು ಹುಲಿ ತೋಳವಲ್ಲ. ನಾನೇ ಉಷಾ. ಒಮ್ಮೆ ಕಣ್ಣೆತ್ತಿ ನೋಡಿದರೆ ತಾನೇ ಗೊತ್ತಾದೀತು."

"ನಿನ್ನನ್ನು ಹುಲಿ ಕರಡಿಯೆಂದೇ ಕರೆಸಿಕೊಂಡಿರುವೆನೇ ?"

" ಹಾಗಾದರೆ ಹೀಗೇಕೆ ಹೆದರಿದಂತೆ—ಸಂಕೋಚಪಡುತ್ತಿದ್ದೀರಿ ? "

" ನನಗೇನೋ ಕೆಲಸವಿತ್ತು, ಹೋಗಬೇಕಾಯಿತು. ಆದರೆ ನೀನು ವಿಭೆಯೊಡನೆ ಏಕೆ ಜಗಳವಾಡಿದೆ ? "

" ಇದೆಂತಹ ಮಾತು ? ಅವಳು ಎಂದೂ ಹಾಗೆ ಬರೆದಿರಲಾರಳು. "

" ಅಬ್ದುಲ್ಲನನ್ನೇಕೆ ಹೊರಗೆ ಹಾಕಿದೆ ? "

" ನಾನು ತೆಗೆದುಹಾಕಿದೆನೆಂದು ಯಾರು ಹೇಳಿದರು ? ಅವನಿಗೆ ಒಂದು ವರ್ಷದಿಂದ ಸಂಬಳ ದೊರೆತಿರಲಿಲ್ಲವಂತೆ. ಮನೆಗೆ ಹೋಗಲು ಉತ್ಸುಕನಾಗಿದ್ದ. ಅವನ ಸಂಬಳ ಸಲ್ಲಿಸಿ ರಜೆಕೊಟ್ಟು ಕಳಿಸಿದೆ. "

ಶೈಲೇಶ ವಿಸ್ಮಿತನಾದ—" ಅವನ ಎಲ್ಲ ಸಂಬಳ ಕೊಟ್ಟುಬಿಟ್ಟೆಯಾ ? ಆವನೆಂದೂ ತಿರುಗಿ ಬರಲಿಕ್ಕಿಲ್ಲ. ಹಾಗಾದರೆ ಗಿರಿಧಾರಿ ಏಕೆ ಹೋದ ? "

" ನೀವು ಅವರ ಸಂಬಳ ಕೊಡದೆ ಯಾಕೆ ತೊಂದರೆಗೀಡುಮಾಡುತ್ತೀರಿ ? ಅವರಿಗೇನು ಮನೆ ಮಠ ಒಂದೂ ಇಲ್ಲವೇ ? ಗಿರಿಧಾರಿಗೂ ಸಂಬಳ ಕೊಟ್ಟು ರಜೆ ಕೊಟ್ಟಿರುವೆ. "

" ಇದೆಲ್ಲ ಅತಿರೇಕವಾಯಿತು. ಈ ಮನೆ ವಶಿಷ್ಠನ ಆಶ್ರಮವಾಗಲು ಇನ್ನೇನೂ ಅಭ್ಯಂತರವಿಲ್ಲ. "—ಅವನು ಇನ್ನೂ ತನಕ ಲೆಕ್ಕದ ಪಟ್ಟಿಯನ್ನೇ ದಿಟ್ಟಿಸುತ್ತಲಿದ್ದ. ಆಗ ಆದರೊಳಗಿನ ದೊಡ್ಡ ಮೊತ್ತವೊಂದರ ಕಡೆಗೆ ಅವನ ಗಮನ ಹೋಯಿತು. " ಇದೇನು ? ೪೦೫ ರೂಪಾಯಿ ? " ಎಂದು ಗಾಬರಿಯಾಗಿ ಕೇಳಿದ.

" ಸೆಟ್ಟಿಗೆ ಈ ರಕಮನ್ನು ಮುಟ್ಟಿಸಿರುವೆ. ಇನ್ನೂ ಇನ್ನೂರರಷ್ಟು ಕೊಡುವುದಿದೆ. ಮುಂದಿನ ತಿಂಗಳು ಪೂರಾ ಸಲ್ಲಿಸುವುದಾಗಿ ಹೇಳಿದ್ದೇನೆ. "

" ಆಂ, ಆ ಸೆಟ್ಟಿಯದು ಆರು ನೂರು ರೂಪಾಯಿ ಬಾಕಿಯಿತ್ತೇ ? "

" ಇರದೇನು ಮಾಡೀತು ? ಬೆಲೆ ಕೊಟ್ಟು ಸಾಮಾನು ತರುವಂತಿಲ್ಲ. ಬಾಕಿ ಎಷ್ಟೆಂದು ನೋಡುವಂತಿಲ್ಲ. ಎರಡು ವರ್ಷದಿಂದಲೂ ಅವನ ಬಾಕಿ ಹಾಗೇ ಬಿದ್ದಿದೆಯಂತೆ. "

" ಈಗಾಗಲೇ ಎರಡು ವರ್ಷದ ಲೆಕ್ಕವನ್ನೂ ಪರಿಶೀಲಿಸಿದೆಯಾ ? "

" ಹೌದು, ನೋಡದೇನು ಮಾಡಲಿ ? ಬೇರೆ ಮಾರ್ಗವಿರಲಿಲ್ಲ. "

ಶೈಲೇಶ ಯೋಚಿಸುತ್ತಿರುವಂತೆ ಕಂಡಿತು. ಉಷೆಯ ಪರಿಚಯವಾಗಿ ಐದೇ ನಿಮಿಷ ಕಳೆದಿದ್ದರೂ ಅವನಿಗೆ ಸಂಕೋಚವೆನಿಸುತ್ತಿತ್ತು.

" ಏನು ಯೋಚನೆ ನಡೆಸಿರುವಿರಿ ? " ಎಂದು ಉಷೆಯೇ ಪ್ರಶ್ನಿಸಿದಳು.

" ಇದ್ದ ಹಣವೆಲ್ಲ ಈಗಲೇ ವೆಚ್ಚವಾದರೆ ಇನ್ನು ಹದಿನೈದು ದಿನ ಹೇಗೆ ದೂಡುವುದು ಎಂದು ಯೋಚನೆ. ಸಂಬಳ ಬರಲು ಇನ್ನೂ ಹದಿನೈದು ದಿನವುಳಿಯಿತು. "

" ನನಗಿಷ್ಟೂ ಮುಂದಾಲೋಚನೆ ಇಲ್ಲವೆಂದು ಭಾವಿಸಿದಿರಾ ? ಇನ್ನು ಹದಿನೈದು ದಿನವೇಕೆ ? ತಿಂಗಳ ಮೊದಲು ಹಣದ ಮಾತೆತ್ತುವೆನೋ ನೋಡಿ ಬೇಕಾದರೆ ! ಆದರೆ ನಿಮಗೆ ಸಾಲ ಬಹಳವಿರಬೇಕೆಂದು ತೋರುತ್ತಿದೆ. ನನ್ನೊಡನೆ ಮರೆಮಾಚಬೇಡಿ. ಗವಳಿ ತನಗೆ ೧೫೦ ರೂಪಾಯಿ ಕೊಡಬೇಕು ಎನ್ನುತ್ತಿದ್ದ. ಅಗಸನದು ೫೦ ರೂಪಾಯಿ ಬಾಕಿಯಂತೆ. ಹೊಲಿಗೆಯದೆಷ್ಟು ಬಾಕಿಯಿದೆಯೋ ದರ್ಜಿಗಳಿಗೇ ಗೊತ್ತು. ಅವರೆಲ್ಲರಿಗೂ ಬಾಕಿಪಟ್ಟಿ ಕಳುಹಿಸಲು ಹೇಳಿರುವೆ. "

" ಇದೆಲ್ಲ ಏನು ಮಾಡಿಬಿಟ್ಟೆ ? ಸಾವಿರಾರು ರೂಪಾಯಿಯ ಲೆಕ್ಕ ತೋರಿಸಿದರೆ ಏನು ಮಾಡುವೆ ? ಎಲ್ಲಿಂದ ಕೊಡುವೆ ? "

" ಒಮ್ಮೆಲೇ ತೀರಿಸಿಬಿಡುತ್ತೇನೆಂದು ನಾನಾದರೂ ಎಲ್ಲಿ ಹೇಳಿದ್ದೇನೆ ? ಮೂರು ನಾಲ್ಕು ತಿಂಗಳಲ್ಲಿ ಅವರ ಸಾಲವನ್ನೆಲ್ಲ ತೀರಿಸಿದರಾಯಿತು. ಇದರ ಹೊರತಾಗಿ ಇನ್ನಾವ ಸಾಲವೂ ಇಲ್ಲವಷ್ಟೇ ? "

" ಹೋದ ಸಲ ಸಿಮ್ಲೆಗೆ ಹೋಗುವಾಗ ನೋಟು ಬರೆದುಕೊಟ್ಟು ಎರಡು ಸಾವಿರ ರೂಪಾಯಿ ಸಾಲ ತಂದಿದ್ದೆ. ಅದರಲ್ಲಿ ಒಂದು ಪೈ ಸಹ ತೀರಿಸಿಲ್ಲ. "

" ಇದನ್ನೆಲ್ಲ ಒಂದು ವರ್ಷದಲ್ಲಿ ತೀರಿಸಲಾಗುತ್ತದೆಯೋ, ಇಲ್ಲವೋ ? ಏನೇ ಇರಲಿ ; ಇನ್ನು ಮುಂದೆ ಮಾತ್ರ ಹಾಗಾಗದಂತೆ ನೋಡಿಕೊಳ್ಳಿ. "

" ನನಗೇಕೋ ಈ ಜನ್ಮದಲ್ಲೇ ಋಣಮುಕ್ತನಾಗುವ ಆಸೆ ತೋರುವುದಿಲ್ಲ."

" ಹಾಗಾದರೆ, ಹಿಂದೆಂದಾದರೂ ಈ ಯೋಚನೆ ಬಂದಿದ್ದಿತೇ ? "

" ಎಷ್ಟೋ ಸಲ ಯೋಚಿಸಿದ್ದೇನೆ. ಅದನ್ನೆಲ್ಲ ಏನು ಹೇಳಲಿ ? ಒಮ್ಮೊಮ್ಮೆ ಮಧ್ಯರಾತ್ರಿಯಲ್ಲಿಯೇ ನಿದ್ರಾಭಂಗವಾಗಿ ಹೊರಳಾಡಿದ್ದೂ ಇದೆ. ಮನಸ್ಸಿಗೆ ನೆಮ್ಮದಿಯೇ ಇಲ್ಲ. ಸಿಕ್ಕ ಸಂಬಳದಿಂದಂತೂ ನಿರ್ವಾಹವಾಗುವಂತಿಲ್ಲ. ಹಣದ ತೊಂದರೆ ಇಲ್ಲದ ತಿಂಗಳೊಂದೂ ಇಲ್ಲ. ಉಷಾ, ಈ ಸಾಲ

ಎಂದಾದರೂ ತೀರಬಹುದೆಂದು ನಿನಗೆನಿಸುವುದೇ ? ''

ಉಷೆಯ ಕಣ್ಣೆವೆ ತೇವವಾಯಿತು. ಅರ್ಧ ಗಂಟೆಯ ಹಿಂದೆ ಅಪರಿಚಿತನಾದ ಮನುಷ್ಯನ ಸುಖದುಃಖದಲ್ಲಿ ಈಗ ಅವಳು ಪಾಲುಗಾರಳು. " ಅದರ ಯೋಚನೆ ಬಿಡಿ. ಅದೇನು ದೊಡ್ಡದಲ್ಲ " ಎಂದು ಧೈರ್ಯ ಹೇಳಿದಳು.

" ಆದರೆ, ಎಲ್ಲರಿಗೂ ತೊಂದರೆ....''

" ಇಲ್ಲ. ಹಾಗಾಗದು. ಅದನ್ನೆಲ್ಲ ನಾನು ನೋಡಿಕೊಳ್ಳುವೆ. "

ಶೈಲೇಶ ಮರುಮಾತಾಡಲಿಲ್ಲ. ಕಾರ್ಮೋಡ ತುಂಬಿದ ಆಕಾಶದಲ್ಲಿ ಎಲ್ಲಿಂದಲೋ ಬೆಳಕು ಬಂದಂತೆ ಭಾಸವಾಯಿತು.

೫

ಶೈಲೇಶನ ಮೇಜಿನ ಮೇಲೆ ಕಾಗದ ಪತ್ರ ಅಸ್ತವ್ಯಸ್ತವಾಗಿ ಹರಡಿತ್ತು. ಯಾರ್ಯಾರಿಂದಲೋ ಬಂದ ಕಾರ್ಡು ಕವರು ಒಂದೆಡೆ; ದೈನಿಕ, ಮಾಸಿಕ, ಸಾಪ್ತಾಹಿಕ ಪತ್ರಿಕೆಗಳ ಗುಂಪು ಇನ್ನೊಂದೆಡೆ. ಕಾಗದ ಪತ್ರಗಳಿಗೆ ಉತ್ತರ ಬರೆಯಬೇಕಿತ್ತು; ಪತ್ರಿಕೆಗಳ ಕಡೆಗೆ ಒಮ್ಮೆ ಕಣ್ಣು ಹಾಯಿಸಬೇಕಿತ್ತು. ಹೀಗಾಗಿ ಬೆಳಗಿನಿಂದ ಬೈಗಿನ ತನಕ ವಿರಾಮವೇ ದೊರೆಯಲಿಲ್ಲ. ದಿನವೆಲ್ಲ ಏಕಾಗ್ರತೆಯಿಂದ ಕೆಲಸ ಮಾಡಿದ ಮೇಲೆ ಅವನ ಮನಸ್ಸು ಹಗುರಾಯಿತು, ಮೋರೆಯ ಮೇಲೆ ಶಾಂತಿಯ ಕಳೆ ಕಾಣಿಸಿತು. ಆಗ ಅವನನ್ನು ಯಾರಾದರೂ ಕಂಡಿದ್ದರೆ ಅವನೊಬ್ಬ ಕರ್ತವ್ಯನಿಷ್ಠ ವ್ಯಕ್ತಿಯೆಂದು ಹೇಳುವಂತಿತ್ತು. ಅಲ್ಲದೆ ಅವನ ಬಗೆಗೆ ಶ್ರದ್ಧೆ ಉತ್ಪನ್ನವಾಗುತ್ತಿತ್ತು. ಆದರೂ, ಅಂತಹ ವ್ಯಕ್ತಿಗಳೂ ಜೀವನದಲ್ಲಿ ಎಡವಿ ಬೀಳುವುದು ತಪ್ಪಿದ್ದಲ್ಲ.

ಕೆಲಸ ಮುಗಿದೊಡನೆಯೇ ಸ್ವಿಚ್ ಒತ್ತಿ ದರ್ಶನಗ್ರಂಥವೊಂದನ್ನು ಓದ ತೊಡಗಿದ. ಅವನು ಒಂದು ನಿಮಿಷವನ್ನೂ ವ್ಯರ್ಥವಾಗಿ ಹೋಗಗೊಡುತ್ತಿದ್ದಿಲ್ಲ. ಅಷ್ಟರಲ್ಲಿ ಕುಮುದೆಯು ಬಂದು " ಊಟಕ್ಕಣಿಯಾಗಿದೆ, ಊಟ ಮುಗಿಸಿ ಹೋಗಲು ಹೇಳಿದ್ದಾರೆ " ಎಂದು ಬಿನ್ನವಿಸಿದಳು.

" ಇನ್ನೂ ಊಟದ ಹೊತ್ತಾಗಿಲ್ಲ. ೫೦ ನಿಮಿಷವಿದೆ. "

" ನಾನವರಿಗೆ ಹಾಗೆಯೇ ತಿಳಿಸಲೇ ? "

" ಆಗಲಿ. ಆ ಅಬ್ದುಲ್ಲನಿರದ್ದರಿಂದಲೇ ಇಷ್ಟೆಲ್ಲ ತೊಂದರೆ. "

ದಾಸಿ ಹೋಗುವುದರಲ್ಲಿದ್ದಳು. 'ಬೇಡ. ಬಡಿಸಿದ್ದನ್ನು ತೆಗೆಯುವು ದೆಂದರೆ ಅಷ್ಟೇ ತೊಂದರೆ. ನಾನೇ ಬರುತ್ತೇನೆಂದು ಹೇಳು" ಎಂದು ಅವ ಳನ್ನು ಕರೆದು ಹೇಳಿದನು.

ಇಂದು ಊಟ ಮಾಡುವಲ್ಲಿ ಎಂದಿನಂತೆ ಮೇಜು ಕುರ್ಚಿ ಇರಲಿಲ್ಲ. ಮಲಗುವ ಕೋಣೆಗೆ ಹೊಂದಿರುವ ಕೋಣೆಯಲ್ಲಿಯೇ ಮಣೆ ಹಾಕಲಾಗಿತ್ತು. ಅಡಿಗೆ ದೇಶೀ ಪದ್ಧತಿಯದು. ಹಿಂದಿನ ಗ್ಲಾಸು, ಫೋರ್ಕು,—ಇವಾವುದೂ ಅಲ್ಲಿರಲಿಲ್ಲ. ಪಾತ್ರೆಗಳಲ್ಲಿ ತಯಾರಿಸಿದ ತರತರದ ಅಡಿಗೆಯ ಕಂಪು ಹರಡಿತ್ತು. ಎದುರಿಗೇ ಉಷೆ ಕುಳಿತಿದ್ದಳು. ಅವಳ ಹತ್ತಿರವೇ ಸೋಮೇಂದ್ರನಿದ್ದ.

"ನೀನೇನೂ ನನ್ನ ಜೊತೆಗೆ ಕುಳಿತುಕೊಳ್ಳುವಂತಿಲ್ಲ. ಆದರೆ ಸೋಮೇಂದ್ರನಿಗಾದರೂ ಈಗ ಬಡಿಸಬಾರದೇ ?"

ಉಷೆಗೆ ಉತ್ತರ ಕೊಡುವ ಆವಶ್ಯಕತೆ ಉಂಟಾಗಲಿಲ್ಲ. ಸೋಮೇಂದ್ರನೇ ತಾಯಿಯ ಜೊತೆಗೆ ಊಟ ಮಾಡುವುದಾಗಿ ಹೇಳಿದ.

"ಈ ಅಡಿಗೆ ನೀನೇ ಮಾಡಿದೆಯಾ ?"

"ಹೂಂ."

"ಇನ್ನೇನು ? ಅಡಿಗೆಯವನ ಹೊಟ್ಟೆಗೂ ಪೆಟ್ಟೆಂದು ತೋರುತ್ತದೆ. ಅವನ ಸಂಬಳವೂ ಬಾಕಿ ಇತ್ತು. ಅದನ್ನು ಕೊಟ್ಟು ಅವನನ್ನೂ ಕಳಿಸಿದೆಯಾ ?"

"ನೌಕರರಿಗೆ ಒಮ್ಮೊಮ್ಮೆ ಮುಂಗಡ ಹಣಕೊಡಬೇಕಾದ ಸಂದರ್ಭ ಗಳೂ ಬರುತ್ತವೆ. ಬಾಕಿ ಇಟ್ಟುಕೊಳ್ಳುವುದರಿಂದಲೇ ಕೆಲಸ ನೀಗದು. ಆದರೆ ಅಡಿಗೆಯವನನ್ನೇನೂ ಕಳಿಸಿಲ್ಲ. ಅವನನ್ನು ಕರೆಸಬೇಕೇ ?"

"ಬೇಡ ಬೇಡ, ಅಷ್ಟೇನೂ ಅವಸರವಿಲ್ಲ. ಒಮ್ಮೊಮ್ಮೆ ಅವನಿಗೂ ಅಡಿಗೆ ಮಾಡಲಿಕ್ಕೆ ಹೇಳು. ಇಲ್ಲವಾದರೆ ಎಲ್ಲ ಮರೆತೇ ಹೋದೀತು. ಪಾಪ ! ಬಡವ ! ಮುಂದೆ ಅಡಿಗೆಯ ಕೆಲಸವನ್ನೂ ಮರೆತನೆಂದರೆ ಅವನಿಗೇ ಹಾನಿ ಯಾದೀತು."

ಇಂದಿನ ಅಡಿಗೆಯ ರುಚಿಯೇ ಬೇರೆ ತೆರನಾಗಿತ್ತು. ಅವನಿಗೆ ತಾಯಿಯ ನೆನಹು ಬಂದಿತು. ಹತ್ತಿರದಲ್ಲಿದ್ದ ತಟ್ಟೆಯಿಂದ ಒಂದು ಬಗೆಯ ಸುವಾಸನೆ ಬರುತ್ತಲಿತ್ತು. ಆ ಜನ ಮಾಂಸ ತಿನ್ನುವವರಲ್ಲ. ಆದರೆ ಕಾಯಿಪಲ್ಯಕ್ಕೆ ಮಸಾಲೆ ಹಾಕಿ ಮಾಂಸದ ಪಲ್ಯದಂತೆಯೇ ತಯಾರಿಸುತ್ತಾರೆ.

" ನನಗೆ ಇಂತಹ ತೋರಿಕೆಯ ಮಾಂಸ ಬೇಡ. ನಿಜವಾದ ಮಾಂಸವೇ ಬೇಕು " ಎಂದ ಶೈಲೇಶ.

" ಒಮ್ಮೆ ತಿಂದಾದರೂ ನೋಡಬಾರದೇ ? "

ಶೈಲೇಶ ಅದನ್ನು ಬಾಯಿಗಿಟ್ಟ. " ಅಲ್ಲ, ಇದು ಮಾಂಸವೇ ? ತರಕಾರಿಯೆಂದೇ ತಿಳಿದಿದ್ದೆ. ಅಲ್ಲ ! ಎಷ್ಟು ಚೆನ್ನಾಗಿ ತಯಾರಿಸಿರುವೆಯೋ ? ಇದನ್ನೆಲ್ಲ ಎಲ್ಲಿ ಕಲಿತೆ ? "

"ನಿಮ್ಮ ಅಬ್ದುಲ್ಲನಿಗೊಂದೇ ಅಡಿಗೆಮಾಡಲು ಬರುತ್ತದೆಂದು ತಿಳಿದಿದ್ದಿರಾ?"

" ಈ ಅಡಿಗೆಯ ರುಚಿ ನೋಡಿದಮೇಲೆ ಯಾರೂ ಹೀಗೆ ಹೇಳಲಾರರು. ಅನುದಿನವೂ ಇಂತಹ ಅಡಿಗೆ ಸಿಗಲು ಪುಣ್ಯ ಬೇಕು. "

" ಅದಕ್ಕೇನಡ್ಡಿ ? ಯಾವ ತೊಂದರೆ ಇದೆ ಹೇಳಿ. "

" ಈ ಅಡಿಗೆಯಿಂದು ಅಬ್ದುಲ್ಲನಿಲ್ಲವಲ್ಲ ಎಂಬ ಶಂಕೆಯಂತೂ ದೂರವಾಯಿತು. ಆದರೆ ತೀರದ ಸಾಲವೊಂದಿದೆಯಲ್ಲ ! "

" ಸಾಲಕ್ಕಾಗಿ ಹೊಟ್ಟೆಗೂ ತಿನ್ನಲಾಗದೆಂದು ಯಾರು ಹೇಳಿದ್ದಾರೆ ? ಅದರ ಚಿಂತೆ ನಿಮಗೆ ಬೇಡ. ತಿನ್ನುಣ್ಣುವುದರಿಂದಲೇ ಇಷ್ಟೊಂದು ಸಾಲವಾಗಿರಲಾರದು. "

" ಉಷಾ, ಏನು ಹೇಳಲಿ ? ನನಗಿಷ್ಟೊಂದು ಸಾಲ ಹೇಗೆ ಆಯಿತೆಂದು ನನಗೇ ಗೊತ್ತಿಲ್ಲ."

" ಆ ಮಾತು ಇರಲಿ. ಅದನ್ನೆಲ್ಲ ನಾನು ನೋಡಿಕೊಳ್ಳುತ್ತೇನೆ. "

ಶೈಲೇಶ ಮರುಮಾತಾಡದೆ ಊಟಮಾಡತೊಡಗಿದ.

ಸೋಮೇಂದ್ರನೇ ಮಾತಿಗೆ ಮೊದಲಿಸಿದ—" ಅಮ್ಮಾ, ನಿನ್ನೆಯ ಕತೆ ಹೇಳಿದ ಹೊರತು ನಾನು ಊಟ ಮಾಡುವುದಿಲ್ಲ; ಹೊಂ, ಜಟಾಯುವಿನ ಕತೆ ಹೇಳಿದ್ದೆಯಲ್ಲ, ಜಟಾಯುವಿನ ಮಗ ಏನು ಮಾಡಿದ ? "

" ಜಟಾಯುವಿನ ಮಗ ಏನಾದರೂ ಮಾಡಿರಬಹುದು. ಆದರೆ ಇದೇನು, ಈ ಮಗ ಮಾತ್ರ ನಿನ್ನನ್ನು ಬಿಟ್ಟಿರುವಂತೆ ತೋರುವುದಿಲ್ಲ ? "

" ಯಾರು ಬಲ್ಲರು ? ಪಾಪ ! ತಾಯಿ ಇಲ್ಲದ ತಬ್ಬಲಿ. ಮನೆಯಲ್ಲಿ ಇನ್ನಾರೂ ಇಲ್ಲ. "

" ಅದೆಲ್ಲ ನಿಜ. ಆದರೆ ತಾಯಿಯನ್ನು ಸಹ ಅವನು ಹೀಗೆ ಅಂಟಿಕೊಂಡಿರಲಿಲ್ಲ ! "

“ಅದು ಹಾಗಿರಲಿ. ತುಸು ಮಾಂಸ ತರಲು ಹೇಳಲೇ ? ಬೇರೇನೂ ತೆಗೆದುಕೊಳ್ಳದಿದ್ದರೂ ಅಡ್ಡಿಯಿಲ್ಲ, ಈ ಮಿಠಾಯಿಯನ್ನು ಮಾತ್ರ ಬಿಟ್ಟು ಏಳಬೇಡಿ. ನನ್ನಾಣೆ ಇದೆ; ದಿನವೆಲ್ಲ ಊಟಮಾಡಿಲ್ಲ.”

ಶೈಲೇಶ ಉಷೆಯನ್ನೇ ದಿಟ್ಟಿಸುತ್ತ ಕುಳಿತ. ಊಟಕ್ಕಾಗಿ ಈ ರೀತಿಯ ಒತ್ತಾಯ—ಊಟ ಮಾಡದಿದ್ದರೆ ಪಡುವ ಸಂಕಟ—ಇದೆಲ್ಲ ಹಿಂದಿನ ದಿನಗಳ ಸವಿನೆನಪನ್ನು ತರುತ್ತಿತ್ತು. ಶೈಲೇಶ ತಾಯಿಗೆ ಒಬ್ಬನೇ ಮಗ. ಅವನಿಗೆ ಬಾಲ್ಯದ ವಾತ್ಸಲ್ಯದ ತೋಯ ತರಂಗಗಳಲ್ಲಿ ತೇಲಾಡಿದ ನೆನಪಾಗಿ ಹೃದಯ ತುಂಬಿ ಬಂತು. ಊಟ ಬಿಟ್ಟೇಳಲು ಮನಸ್ಸು ಬರಲಿಲ್ಲ.

“ಉಷಾ, ಇನ್ನು ಮುಂದೆ ನಾನು ಯಾವ ಲೆಕ್ಕ ಇಡುವ ಗೋಜಿಗೂ ಹೋಗುವುದಿಲ್ಲ. ಎಲ್ಲ ಭಾರವೂ ನಿನ್ನದೇ” ಎಂದು ಹೇಳಿ ಎದ್ದ.

## ೬

ನೋಡುನೋಡುತ್ತಲೇ ವಾರವೊಂದು ಉರುಳಿತು. ರವಿವಾರ ಬಂದಿತು. ಶೈಲೇಶನಿಗೆ ಅದರ ಎಚ್ಚರವೇ ಇರಲಿಲ್ಲ. ಉಷೆಯು ನಸುಕಿನಲ್ಲಿಯೇ “ನೀವು ಒಮ್ಮೆ ವಿಭೆ ಇದ್ದಲ್ಲಿ ಹೋಗಿ ಬರಬಾರದೇ ? ಆವಳು ಏನು ತಿಳಿದು ಕೊಂಡಿರುವಳೋ ಏನೋ? ನಾನು ದಿನಾಲು ನೆನಪು ಮಾಡುತ್ತಲೇ ಇದ್ದೇನೆ. ಆದರೂ ನೀವು ಹೋಗಿಲ್ಲ. ನಮ್ಮಿಬ್ಬರಲ್ಲಿ ಜಗಳ ತಂದಿಡಬೇಕೆಂದು ಮಾಡಿರುವಿರಾ ?” ಎಂದು ಕೇಳಿದಳು.

“ಏನು ಮಾಡಲಿ? ಕಾಲೇಜಿನ ಕೆಲಸದಲ್ಲಿ ಬಿಡುವೆಂಬುದೇ ಇಲ್ಲ.”

“ಅದನ್ನೆಲ್ಲ ಬಲ್ಲೆ. ಕಾಲೇಜು ಬಿಟ್ಟ ಮೇಲೆ ಅದೇ ದಾರಿಯಿಂದ ಏಕೆ ಹೋಗಿ ಬರಬಾರದು ?”

“ತಿರುಗಿ ಬರುವಾಗ ನನಗೆಷ್ಟು ಆಯಾಸವಾಗುತ್ತಿದೆಯೆಂದು ನೀನೇನು ಬಲ್ಲೆ? ಎಂದಾದರೂ ಹುಡುಗರಿಗೆ ಪಾಠ ಹೇಳಿದ್ದರೆ ಆಗ ಗೊತ್ತಾಗುತ್ತಿತ್ತು ಅದರ ಕಷ್ಟ!”

“ದಮ್ಮಯ್ಯ, ನಿಮ್ಮ ಕಾಲಿಗೆ ಬೀಳುತ್ತೇನೆ. ರವಿವಾರವೂ ಪಾಠ ಹೇಳುವುದು ಇದೆಯೆಂಬುದು ಬಲ್ಲೆ” ಎಂದು ಆಳಿಗೆ ಕರೆದು ಗಾಡಿಯನ್ನು ಸಿದ್ಧಪಡಿಸಲು ಆಜ್ಞಾಪಿಸಿದಳು.

ಶೈಲೇಶ ಹೋಗುವಾಗ ಮಗನಿಗೂ ಬಾ ಎಂದು ಕರೆದ. ಆದರೆ ಅವನು ಒಪ್ಪಲಿಲ್ಲ. ಅವನು ಮಲತಾಯಿಯ ಮೈಗೆ ಒರಗಿ ನಿಂತ. ಅತ್ತೆಯ ಮನೆಗೆ ಹೋಗಲು ಅವನಿಗೆ ಮನಸ್ಸಿರಲಿಲ್ಲ. ಹಿಂದಿನ ಘಟನೆಯ ನೆನಪಾಗಿ ಅವನು ಹೆದರಿದ. ಉಷೆಯು ಅವನನ್ನು ತಬ್ಬಿಕೊಂಡು "ಸೋಮೇಂದ್ರ ಇಲ್ಲಿಯೇ ಇರಲಿ. ಇನ್ನೆಂದಾದರೂ ಹೋಗುತ್ತಾನೆ!" ಎಂದು ನಗುನಗುತ್ತ ಒಳಗೆ ಹೋದಳು.

ಶ್ಯಾಮ್ ಬಜಾರಿನಿಂದ ಶೈಲೇಶ ಮರಳಿದಾಗ ಎರಡೂವರೆ ಗಂಟೆಯಾಗಿತ್ತು. ಅವನ ಜೊತೆಗೆ ವಿಭೆ, ಕ್ಷೇತ್ರಮೋಹನ, ಮತ್ತು ಅವನ ತಂಗಿ ಬಂದಿದ್ದರು. ಶೈಲೇಶನಿಗೆ ವಿಭೆಯನ್ನು ಸಂಗಡ ಕರೆದುಕೊಂಡು ಬರುವ ಇಷ್ಟವಿರಲಿಲ್ಲ. ಅವಳು ತಾನಾಗಿಯೇ ಬಂದಿದ್ದಳು. ಉಷೆಯ ಮೇಲೆ ಅವಳ ಅನೇಕ ಆರೋಪಗಳಿದ್ದವು. ಅಣ್ಣನ ಮೇಲೂ ಅಷ್ಟೇ ಕೋಪವಿತ್ತು. ತನ್ನಷ್ಟು ಕಲಿಯದ, ಹಳ್ಳಿಯ ಕುಸಂಸ್ಕಾರದಲ್ಲಿ ಬೆಳೆದ ಉಷೆಯನ್ನು ನಾಲ್ಕು ಮಂದಿಯ ಮುಂದೆ ಹೀಯಾಳಿಸಲು ಅವಳು ಬಂದಿದ್ದಳು.

ಇಷ್ಟೊತ್ತಿನ ತನಕವೂ ಅವಳು ಅಣ್ಣನ ಕಿವಿ ತುಂಬಿದುದು ಒಂದೇ ಮಾತು—"ಅವಳನ್ನು ತಂದು ಜನರಿಗೆ ಆಡಿಕೊಳ್ಳಲು ಹಾದಿ ಮಾಡಿದೆ. ಇಷ್ಟೊಂದು ದಿನ ಅವಳು ಹೆರವರಲ್ಲಿದ್ದವಳು. ಅವಳನ್ನು ನೀನಲ್ಲ ಹೊರ ಹಾಕಿದವನು, ನಿನ್ನ ಹಿರಿಯರು. ಈಗ ಅವಳನ್ನು ಕರೆತಂದು ನೀನು ಹಿರಿಯರಿಗೆ ಅವಮಾನ ಪಡಿಸಿದೆ. ಆ ಕಲಂಕವನ್ನು ತೊಡೆದು ಹಾಕಬೇಕು. ಇಷ್ಟೆಲ್ಲ ಅರಿಷ್ಟಕ್ಕೆ ಅವಳೇ ಕಾರಣ. ಅಲ್ಲದೆ ನಮ್ಮಂತಹ ದೊಡ್ಡ ಮನೆತನದಲ್ಲಿರಲು ಅವಳು ಯೋಗ್ಯಳಲ್ಲ. ಅವಳು ನನ್ನ ಅಣ್ಣನ ಹೆಂಡತಿಯೆಂದು ನನ್ನ ಗೆಳತಿಯರಲ್ಲಿ ಪರಿಚಿತರಲ್ಲಿ ಹೇಳಿಕೊಳ್ಳಲಿಕ್ಕೂ ನಾಚಿಕೆಯೆನಿಸುತ್ತಿದೆ. ಅವಳನ್ನು ಔತಣ, ಸಭೆ, ಸಮಾರಂಭಗಳಿಗೆ ಕರೆದುಕೊಂಡು ಹೋಗುವುದಾದರೂ ಹೇಗೆ? ಇಂತಹ ಅಸಂಸ್ಕೃತಳನ್ನು ನನ್ನವಳೆಂದು ಹೇಗೆ ಕರೆಯಲಿ?"

ಕ್ಷೇತ್ರಮೋಹನನಿಗೆ ಉಷೆಯ ಪರಿಚಯ ಎಳ್ಳಷ್ಟೂ ಇರಲಿಲ್ಲ. ಆದರೂ ಅವಳ ಪರವಾಗಿ ಒಂದೆರಡು ಮಾತಾಡಿದ. ಆದರೆ ಹೆಂಡತಿಯ ಆರ್ಭಟದ ಮುಂದೆ ಆತನ ಆಟ ನಡೆಯಲಿಲ್ಲ.

"ನನಗೇನೂ ತಿಳಿಯದೆಂದು ಅಣ್ಣ ತಿಳಿದಿರಬೇಕು; ನಾನು ಬೇರಿನಿಂದ

ಎಲೆಯ ವರೆಗೆ ಎಲ್ಲ ಬಲ್ಲೆ. ಮನೆಯಲ್ಲಿ ಕಾಲಿಟ್ಟವಳೇ ಅಬ್ದುಲ್ ಮುಸಲ್ಮಾನನೆಂದು ಹೊರಹಾಕಿದಳು. ಕೀಳು ಕುಲದವನೆಂದು ಗಿರಿಧಾರಿಯೂ ಹೊರಬೀಳಬೇಕಾಯಿತು. ಇಂತಹ ಜಾತಿಭೇದವೆಣಿಸುವವರೊಡನೆ ನಾವು ಯಾವ ಸಂಬಂಧವನ್ನೂ ಇಟ್ಟುಕೊಳ್ಳಲಾರೆವು. ಇದರಿಂದ ಯಾರಿಗೆ ಬೇಸರವಾದರೂ ಚಿಂತೆಯಿಲ್ಲ."

ಯಾರನ್ನು ಉದ್ದೇಶಿಸಿ ಈ ಮಾತು ಆಡುತ್ತಾಳೆಂದು ಎಲ್ಲರಿಗೂ ತಿಳಿಯಿತು. ಆಗ ಶೈಲೇಶನೇ ಸಾವಕಾಶವಾಗಿ "ಅಬ್ದುಲ್ ಗಿರಿಧಾರಿಯರನ್ನು ತೆಗೆದುಹಾಕಿದುದು ಅವರ ಜಾತಿಯ ಸಲುವಾಗಿ ಅಲ್ಲ. ತಂತಮ್ಮ ಮನೆಗೆ ಹೋಗಿ ಬರಲು ಅವರೇ ಆತುರರಾಗಿದ್ದರು" ಎಂದನು.

ಅಣ್ಣನ ಈ ಮಾತಿನಿಂದ ಅವಳು ಸುಮ್ಮನಾಗಲಿಲ್ಲ. ಸ್ವಲ್ಪವೂ ದಾಕ್ಷಿಣ್ಯವಿಲ್ಲದೆ "ಪಾಪ, ಇಷ್ಟೊಂದು ದಿನ ಅವರಿಗೆ ಮನೆಯ ಎಚ್ಚರವೇ ಇರಲಿಲ್ಲ. ಈ ಕಲಿ ಮನೆ ಹೊಕ್ಕೊಡನೆಯೇ ಅವರಿಗೆಲ್ಲ ಮನೆಯ ಯೋಚನೆ ಬಂದು ಓಡಿಯೇ ಹೋದರೆಂದು ಕಾಣುತ್ತದೆ" ಎಂದಳು.

ಇಂತಹ ವ್ಯಂಗ್ಯಕ್ಕೆ ಏನೆಂದು ಉತ್ತರ ಕೊಡಬಹುದು ? ಅವನು ಮೌನವಾಗುಳಿದ.

"ಊಳಿಗದವರೆಲ್ಲ ಓಡಿಹೋದ ಮೇಲೆ ಕೆಲಸ ಹೇಗೆ ನಡೆಯುತ್ತಿದೆ?"

"ಹೇಗೋ ನಡೆಯುತ್ತಿದೆ."

"ಹೋದ ಕೆಲಸದವರು ಮರಳಿ ಬರುವಂತೆ ನನಗೇನೂ ಕಾಣುವುದಿಲ್ಲ. ಮನೆಯನ್ನೇನು ಕರ್ಮಠರ ಮನೆಯಂತೆ ಮಾಡುವ ಯೋಚನೆಯೇ ? ಸಮಾಜದಲ್ಲಿರುವುದಾದ ಮೇಲೆ ಜನ ಮೆಚ್ಚುವಂತೆ ನಡೆಯಬೇಕು. ಇನ್ನಾರನ್ನಾದರೂ ಹುಡುಕಿಕೊಳ್ಳಿ. ಹೀಗೆ ಮಾಡಿದರೆ ಜನವೆಲ್ಲ ಏನೆಂದಾರು ? "

"ಕೆಲಸ ಸಾಗದಿದ್ದರೆ ಆಳನ್ನು ಇಟ್ಟುಕೊಳ್ಳಲೇ ಬೇಕಾದೀತು."

"ಕೆಲಸ ಹೇಗೆ ನಿರ್ವಹಿಸುತ್ತೀರೋ ನಿಮಗೇ ಗೊತ್ತು. ನಮಗಂತೂ ತಿಳಿಯದು. ತವರುಮನೆಯೆಂದು ಬಂದರೆ ಒಂದು ಕಪ್ಪು ಚಹಾಕ್ಕೂ ತತ್ವಾರ."

ಕ್ಷೇತ್ರಮೋಹನ ಅಣ್ಣತಂಗಿಯರ ಮಾತಿನಲ್ಲಿ ನಡುವೆ ಬಾಯಿಹಾಕುವುದು ತರವಲ್ಲವೆಂದು ಸುಮ್ಮನಿದ್ದ. ಆದರೆ ಈಗ ಸುಮ್ಮನಿರುವುದಾಗಲಿಲ್ಲ ಅವನಿಂದ. "ಮೊದಲೊಮ್ಮೆ ಹೋಗಿಯಾದರೂ ಹೋಗುವಾ. ಈಯುವ ಕೋಳಿಯ ಮೊಟ್ಟೆ ಮೊದಲೇ ಲೆಕ್ಕಮಾಡುವುದೇಕೆ ?" ಎಂದ ಅವನು.

“ ಅಗುಳು ಹಿಚುಕಿದರೆ ಅನ್ನದ ಲಕ್ಷಣ ಗೊತ್ತಾಗಲಾರದೇ ? ಬಂದ ದಿನವೇ ನೋಡಿದ್ದೇನೆ ಎಲ್ಲ ” ಎಂದವಳೇ ವಸ್ತ್ರ ಬದಲಿಸಲು ಹೊರಟು ಹೋದಳು ಅವಳು.

ವಿಭೆಯ ದೂರು ಎಳ್ಳಷ್ಟೂ ದಿಟವಲ್ಲ. ಆವಳು ಉಷೆಯ ಜೊತೆಗೆ ಇದ್ದುದು ಕೆಲವೇ ನಿಮಿಷ. ಅಲ್ಲಿಯ ವ್ಯವಸ್ಥೆ ನೋಡುವ ಇಚ್ಛೆಯಾಗಲೀ ತಾಳ್ಮೆಯಾಗಲೀ ಆವಳಿಗಿರಲಿಲ್ಲ. ಆದರೆ ಇದು ಶೈಲೇಶನಿಗಾಗಲಿ ಕ್ಷೇತ್ರಮೋಹನನಿಗಾಗಲಿ ಗೊತ್ತಿಲ್ಲ.

“ ಶೈಲೇಶ, ನಿಜವಾಗಿ ನಡೆದದ್ದಾದರೂ ಏನು ? ಆಳುಗಳನ್ನೆಲ್ಲ ಹೊರ ಹಾಕಿ ಒಮ್ಮೆಲೇ ಸನ್ಯಾಸಿಯಾಗುವ ಯೋಚನೆಯೋ ! ಈಗ ಅಡಿಗೆಯನ್ನು ಯಾರು ಮಾಡುತ್ತಾರೆ ? ”— ಕ್ಷೇತ್ರಮೋಹನ ಕೇಳಿದ.

“ ದಿನಾಲು ಅನ್ನ, ಸಾರು ಪಲ್ಯ ಮಾಡುತ್ತಾರೆ. ಅದೇ ನಮ್ಮ ಊಟ. ”

“ ಅದು ಗಂಟಲಲ್ಲಿ ಸರಿಯಾಗಿ ಇಳಿಯುತ್ತದೆಯೆ ? ”

“ ಆದರಲ್ಲೇನು ಸಂದೇಹ ? ”

“ಅದು ನನಗೂ ಗೊತ್ತು. ಅಲ್ಲದೆ ಶಾಕಾಹಾರ ನನಗೆ ಸೇರುವುದಿಲ್ಲವೆಂದಲ್ಲ. ಆದರೆ ಶಾಕಾಹಾರದಿಂದಲೇ ಶರೀರಕ್ಕೆ ಬೇಕಾದ ಪೋಷಕದ್ರವ್ಯ ಸಿಕ್ಕೀತೆಂದು ಮಾತ್ರ ಒಪ್ಪಲಾರೆ. ಹೀಗೆಯೇ ಜೀವನ ಕಳೆಯಬೇಕೆನ್ನುವೆಯಾ ? ”

“ ಸರಿಯಾಗಿ ಹೇಳುವುದಾದರೆ ನಾನು ಯೋಚನೆಯನ್ನೇ ಮಾಡಿಲ್ಲ. ಗೃಹಕೃತ್ಯದಲ್ಲಿ ಯಾವುದೇ ರೀತಿಯಿಂದ ಕೈಹಾಕುವ ಅಗತ್ಯ ತೋರುವುದಿಲ್ಲ ನನಗೆ. ”

“ ಈ ಮಾತು ನಿನ್ನ ತಂಗಿಯ ಕಿವಿಗೆ ಬೀಳದಂತೆ ಮಾತ್ರ ಜಾಗರೂಕನಾಗಿರು. ”

“ ತಂಗಿಯ ಹೇಳಿಕೆಗೆ ಕಿವಿಗೊಡತೊಡಗಿದರೆ ಕೆಲಸ ಸಾಗದು. ಈಗ ಸುಖವು ಸ್ಥಾಯಿಯಾದೀತೆಂಬ ಆಸೆ ಕಾಣುತ್ತಿದೆ. ಹುಟ್ಟುವಳಿಗಿಂತ ವೆಚ್ಚ ಹೆಚ್ಚಾದೀತೆಂಬ ಭಯವಿಲ್ಲ. ಕೈತುಂಬ ಸಾಲವಾದುದರಿಂದ ಹಗಲಿರುಳೂ ಅದೇ ಚಿಂತೆಯಾಗಿತ್ತು. ಹದಿನೈದು ತಾರೀಕು ಆಗುವುದರೊಳಗೇ ಕೈ ಬರಿದು. ಉಳಿದ ಹದಿನೈದು ದಿನ ಹೇಗೆ ಕಳೆಯುತ್ತಿದ್ದೆನೋ ದೇವರು ಬಲ್ಲ ! ಈಗ ಕಂಡಕಂಡವರನ್ನು ಕೈಗಡ ಕೇಳುತ್ತ ತಿರುಗುವ ಸಂದರ್ಭವಿಲ್ಲ. ಸಿಗುತ್ತಿರುವ ವೇತನವೇ ಸಾಕಾಗುತ್ತದೆ. ಆದುದರಿಂದ ನಿಶ್ಚಿಂತೆಯಾಗಿದೆ. ”

“ಹಣದ ಚಿಂತೆಯಿಂದ ಹಣ್ಣಾದವನು ನೀನೊಬ್ಬನೇ ಅಲ್ಲ; ನನ್ನ ಪಾಡು ನಾಯಿಪಾಡು.”

“ಇಲ್ಲಿಂದ ಪ್ರಯಾಗಿಗೆ ಹೋಗುವಾಗ ಒಂದು ತಿಂಗಳ ಸಂಬಳ ಇಟ್ಟು ಅಷ್ಟರಿಂದಲೇ ಹೇಗಾದರೂ ತಿಂಗಳು ದೂಡಲು ಹೇಳಿಹೋಗಿದ್ದೆ. ಅಷ್ಟು ಹಣ ಮೊದಲೆಂದೂ ಸಾಕಾಗುತ್ತಿರಲಿಲ್ಲ. ಸೋಮೇಂದ್ರನ ತಾಯಿ ಬದುಕಿದ್ದಾಗಲೂ ಸಾಲವಾಗುತ್ತಿತ್ತು. ಅವಳು ತೀರಿಕೊಂಡ ಮೇಲೂ ಅದೇ ಹಾಡು. ಆ ಇಬ್ಬರು ನೌಕರರನ್ನು ತೆಗೆದುಹಾಕಿದ್ದರಿಂದ ಅವರು ಅಪ್ರಸನ್ನರಾಗಿ ಮನೆಗೆ ಹೋಗಿದ್ದಾರೆಂದು ನನಗೆ ಎನಿಸುವುದಿಲ್ಲ. ಅವರಿಗೆ ಒಂದು ವರ್ಷದ ಪೂರಾ ಸಂಬಳ ಕೊಟ್ಟದ್ದರಿಂದ ಸಂತೋಷವಾಗಿ ಮನೆಗೆ ಹೋಗಿದ್ದಾರೆ. ಸೆಟ್ಟಿಯ ಅಂಗಡಿಯಲ್ಲಿ ನಾನ್ನೂರು ರೂಪಾಯಿ ಸಾಲವಿತ್ತು. ಅದನ್ನೆಲ್ಲ ತೀರಿಸಿದ್ದಲ್ಲದೆ ಸಣ್ಣಪುಟ್ಟ ಸಾಲಗಳೂ ಮುಗಿದಿವೆ. ಪ್ರತಿಯೊಂದು ಪೈಗೂ ಲೆಕ್ಕ ಇಟ್ಟಿದ್ದಾಳೆ. ಆ ಲೆಕ್ಕ ನೋಡಿ ಗಾಬರಿಯಿಂದ ‘ಉಷಾ, ಇನ್ನೂ ಹದಿನೈದು ದಿನವಾಗಿಲ್ಲ, ಇಷ್ಟೆಲ್ಲ ವೆಚ್ಚ ಮಾಡಿದರೆ ಮುಂದೇನು ಗತಿ?’ ಎಂದು ಕೇಳಿದೆ. ಅದಕ್ಕೆ ಅವಳು ‘ನಾನೇನು ಅರಿಯದ ಹಸುಳೆಯಲ್ಲ. ಅಷ್ಟು ತಿಳಿವಳಿಕೆ ನನಗಿದೆ’ ಎಂದಳು. ಅಲ್ಲದೆ ಊಟೋಪಚಾರದಲ್ಲಿಯೂ ನನಗೆ ಯಾವ ತೊಂದರೆಯೂ ಕಂಡುಬಂದಿಲ್ಲ. ಆ ಅನ್ನ ಸಾರೇ ಅಮೃತದಷ್ಟು ರುಚಿಯಾಗಿದೆ. ನಾನು ಇನ್ನೆರಡು ದೊಡ್ಡ ಸಾಲ ಮುಗಿಸುವುದಿದೆ. ಒಂದು, ಪ್ರೋನೋಟಿನಿಂದ ತಂದ ಎರಡು ಸಾವಿರ ರೂಪಾಯಿ; ಇನ್ನೊಂದು, ಸಿಂಪಿಗರ ಸಾಲ. ಇವೆರಡು ತೀರಿತೆಂದರೆ ನನ್ನ ಕೈ ಹಿಡಿಯುವವರು ಯಾರೂ ಇಲ್ಲ.”

ಕ್ಷೇತ್ರಮೋಹನ ಮಾತನಾಡಲು ಬಾಯಿ ತೆರೆದಿದ್ದ. ಆದರೆ ವಿಭಾ ಬರುತ್ತಿದ್ದುದರಿಂದ ಸುಮ್ಮನಾದ. ಅಷ್ಟರಲ್ಲಿ ಮೋಟರೂ ಅಣಿಯಾದುದರಿಂದ ನಾಲ್ವರೂ ಕುಳಿತರು.

ಕ್ಷೇತ್ರಮೋಹನ ಯೋಚನಾಮಗ್ನನಾಗಿದ್ದುದರಿಂದ ದಾರಿಯಲ್ಲಿ ಯಾರ ಮಾತೂ ಅವನ ಕಿವಿಗೆ ಹೋಗಲಿಲ್ಲ.

ಸ್ವಲ್ಪ ಹೊತ್ತಿನಲ್ಲಿಯೇ ಶೈಲೇಶನ ಮನೆಯ ಮುಂದೆ ಮೋಟರು ಬಂದು ನಿಂತಿತು. ಮೊದಲು ಸೋಮೇಂದ್ರ ಕಣ್ಣಿಗೆ ಬಿದ್ದ. ಆತ ತನ್ನ ಅಡಿಗೆಯನ್ನು ಸರಿಪಡಿಸುವುದರಲ್ಲಿ ಮಗ್ನನಾಗಿದ್ದ. ಅವನ ರೂಪು ಕಂಡು ಯಾರ ಬಾಯಿಂದಲೂ ಮಾತು ಹೊರಡಲಿಲ್ಲ.

ಗಂಗಾನದಿಯ ಸ್ನಾನಘಟ್ಟದಲ್ಲಿ ದೇವರ ಮುದ್ರೆಯೊತ್ತುವವರು ಅನೇಕರಿದ್ದಾರೆ. ಅವರ ಕೈಯಲ್ಲಿ ದೇವರ ಹೆಸರಿನ ಹಾಗೂ ಮೂರ್ತಿಯ ಅನೇಕ ಮುದ್ರೆಗಳಿರುತ್ತವೆ. ಅವುಗಳಿಂದ ಸ್ನಾನ ಮಾಡಿದವರ ಮೈಮೇಲೆಲ್ಲ ಮುದ್ರೆ ಒತ್ತುತ್ತಾರೆ. ಸೋಮೇಂದ್ರನ ಹಣೆ, ಎದೆ, ಹೆಚ್ಚೇನು—ಸರ್ವಾಂಗದಲ್ಲೂ ಮುದ್ರಾಧಾರಣೆಯಾಗಿದ್ದಿತು. ಎಲ್ಲ ದೇವತೆಗಳೂ ಅವನ ಮೈಮೇಲೆ ಕಂಗೊಳಿಸುತ್ತಿದ್ದರು.

ವಿಭೆಗೆ ನಗು ತಡೆಯಲಾಗಲಿಲ್ಲ. "ಮಗೂ, ನಿನ್ನ ರೂಪು ನೋಡುವಂತಿದೆ. ಚಿರಂಜೀವಿಯಾಗು" ಎಂದು ಹರಸಿದಳು ಅವಳು.

ತಂಗಿ ಮತ್ತು ಭಾವನ ಎದುರು ಶೈಲೇಶನಿಗೆ ನಾಚಿಕೆಯಾಯಿತು. ಅವನು ಕೋಮಲ ಸ್ವಭಾವದವನು. ಸುಮ್ಮಸುಮ್ಮನೆ ಗದ್ದಲ ಮಾಡುವುದು ಅವನ ಮನಸ್ಸಿಗೆ ಒಗ್ಗದ ಮಾತು. ಆದರೆ ತಂಗಿಯ ಈ ಕಟುವ್ಯಂಗ್ಯ ಅಸಹ್ಯವಾಯಿತು. ಆ ಸಿಟ್ಟನ್ನು ಮಗನ ಮೇಲೆ ಕಾರಿದ. ಅವನ ಕೆನ್ನೆಗೊಂದು ಏಟು ಕೊಟ್ಟು "ಏನಿದು ಹೋಳೀ ಹಬ್ಬ? ಇದಕ್ಕಾಗಿ ಎಲ್ಲಿಗೆ ಹೋಗಿದ್ದೆ?" ಎಂದು ಗದರಿದ.

ತಾಯಿಯ ಜೊತೆಗೆ ಗಂಗಾಸ್ನಾನಕ್ಕೆ ಹೋಗಿದ್ದೆನೆಂದು ಅವನು ಅಳುತ್ತಳುತ್ತ ಹೇಳಿದ. ಶೈಲೇಶ ಅವನಿಗೆ ಇನ್ನೊಮ್ಮೆ ಏಟಿನ ರುಚಿ ತೋರಿಸಿ ಸಾಬೂನು ಹಚ್ಚಿ ಮೈ ತೊಳೆದುಕೊಂಡು ಬರಲು ಆಜ್ಞಾಪಿಸಿದ.

ಆ ಮೇಲೆ ಮೂವರೂ ದಿವಾಣ್‌ಖಾನೆಗೆ ಹೋಗಿ ಕುಳಿತರು. ಅಣ್ಣ ತಂಗಿ ಇಬ್ಬರ ಮೋರೆಯೂ ಗಂಭೀರವಾಗಿತ್ತು. ಕೆಲಹೊತ್ತು ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಶೈಲೇಶನ ಮೋರೆ ನಾಚಿಕೆಯಿಂದ ಬಾಡಿತ್ತು. ಮಗನ ರೂಪು ಈ ರೀತಿಯಾದೀತೆಂದು ಅವನು ಕನಸಿನಲ್ಲಿಯೂ ಭಾವಿಸಿರಲಿಲ್ಲ.

"ಹೀಗಾಗುವುದೆಂದು ನನಗೆ ಮೊದಲೇ ಗೊತ್ತಿತ್ತು" ಎಂದು ವಿಭಾ ನುಡಿದಳು.

"ನಿಮ್ಮ ಜೊತೆಗೆ ತಿರುಗಾಡುವುದಕ್ಕೂ ಸಂಚಕಾರ ಬಂದಿತು! ಸುಮ್ಮನೆ ಆ ಹುಡುಗನಿಗೆ ಹೊಡೆದು ಸರಸದಲ್ಲಿ ವಿರಸವನ್ನುಂಟು ಮಾಡಿದಿರಲ್ಲ!"

ಗಂಡನ ಮಾತು ಕೇಳಿ ವಿಭೆಗೆ ಅತ್ಯಂತ ವಿಸ್ಮಯವಾಯಿತು. "ಇದೇನು ಹುಡುಗಾಟವೆಂದು ತಿಳಿದಿರಾ?" ಎಂದಳು ಅವಳು.

"ಇದರಲ್ಲಿ ಆದ ದೊಡ್ಡ ಅಪರಾಧವೇನು?"

"ಆ—ಎಂದರೆ?"

"ಇಷ್ಟೂ ಗೊತ್ತಾಗುವುದಿಲ್ಲವೇ? ಇಂದಿನ ಗಂಗಾಸ್ನಾನಕ್ಕೆ ಬಹಳ ಮಹತ್ವವಿದೆ. ಆದ್ದರಿಂದ ಸೋಮೇಂದ್ರ ತಾಯಿಯ ಜೊತೆಯಲ್ಲಿ ಗಂಗಾಸ್ನಾನ ಮಾಡಿದ. ಎಂದರೆ ನಲ್ಲಿಯ ನೀರಿನ ಬದಲು ಗಂಗಾಸ್ನಾನ ಮಾಡಿದ. ಇದರಿಂದ ಯಾವ ಪಾಪ ತಗಲಿತೆಂದು ನನಗಂತೂ ಗೊತ್ತಾಗಲಿಲ್ಲ."

"ಆ ಮೇಲೆ?"

"ಮುಂದಿನ ಘಟನೆಯೂ ಸ್ವಾಭಾವಿಕವಾದುದೇ. ಅಲ್ಲಿ ಯಾವಾಗಲೂ ಮುದ್ರಾಧಾರಣ ಮಾಡಿಸುವವರ ಗದ್ದಲವಿದ್ದೇ ಇರುತ್ತದೆ. ಯಾರೋ ಹುಡುಗನನ್ನು ಕಂಡು ಕಾಲಾಣೆ ಅರ್ಧಾಣೆ ಆಸೆಗಾಗಿ ಚಂದನಮುದ್ರೆ ಹೊಡೆದಿರಬೇಕು. ಅದಕ್ಕಾಗಿ ಇಷ್ಟೆಲ್ಲ ಬೊಬ್ಬಾಟ ಮಾಡುವುದೇಕೆ?"

"ಇದರ ಪರಿಣಾಮವೇನಾದೀತೆಂದು ಯೋಚಿಸಿರುವಿರಾ?"

"ಪರಿಣಾಮವೇನು ಮಣ್ಣು! ಕೈಕಾಲು ತೊಳೆಯುವಾಗ ಎಲ್ಲವೂ ತೊಳೆದುಹೋಗುತ್ತದೆ. ಇದೇ ಅದರ ಪರಿಣಾಮ."

"ಓಹೋ, ಇಷ್ಟೇ ಏನು? ನಿಮ್ಮ ಮಗ ಹೀಗೆ ಮಾಡಿದ್ದರೆ ಸೈರಿಸುತ್ತಿದ್ದಿರಾ?"

"ನನಗೆ ಮಕ್ಕಳೇ ಇಲ್ಲದಿರುವಾಗ ಇಂತಹ ನಿರರ್ಥಕ ವಾದ ಹೂಡಿ ಏನು ಪ್ರಯೋಜನ?"

"ತರ್ಕ ವ್ಯರ್ಥವಾಗಬಹುದು. ಚಂದನ ತೊಳೆದರೆ ಹೋಗಬಹುದು. ಆದರೆ ಇದರ ಪರಿಣಾಮ ಮಾತ್ರ ಅಷ್ಟು ಸುಲಭವಾಗಿ ಮರೆಯುವಂತಿಲ್ಲ. ಮಕ್ಕಳ ಭಾವೀ ಜೀವನ ಸುಗಮವಾಗುವಂತೆ ನೋಡಿಕೊಳ್ಳುವುದು ಹಿರಿಯರಾದ ನಮ್ಮ ಕರ್ತವ್ಯ. ನೀವು ಒಪ್ಪಿಕೊಳ್ಳಿ ಇಲ್ಲವೆ ಬಿಡಿ. ಆದರೆ ಇಂದಿನ

ಘಟನೆ ಮಾತ್ರ ಅನುಚಿತವೆಂದು ಸಾರಿ ಸಾರಿ ಹೇಳುತ್ತೇನೆ."

"'ನೀವು' ಎಂದು ಸುಮ್ಮನೆ ಏಕೆ ಹೇಳುತ್ತೀಯೆ? ಇಷ್ಟು ಹೊತ್ತು ನಿನ್ನೊಡನೆ ಮಾತಾಡುತ್ತಿದ್ದವನು ನಾನೊಬ್ಬನೇ. ಶೈಲೇಶ ಬಂದವನೇ ಮಗುವಿಗೆ ಕೆನ್ನೆಗೆ ಕೊಟ್ಟ. ನಿನ್ನ ದೃಷ್ಟಿಯಿಂದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿದ. ಇನ್ನು ಉಷೆ ಎಷ್ಟೆಂದರೂ ಬ್ರಾಹ್ಮಣರ ಸಂಸ್ಕೃತಿಯಲ್ಲಿ ಬೆಳೆದ ಹುಡುಗಿ. ಈ ಮನೆಯನ್ನು ಮೆಟ್ಟಿದ ದಿನದಿಂದಲೇ ಮೇಡಂ ಆಗಲಾರಳಷ್ಟೆ? ಏನೇ ಇರಲಿ. ನೀವೇ ಅಣ್ಣ ತಂಗಿ ಯೋಚಿಸಿಕೊಳ್ಳಿ. ನಾನು ಸ್ವಲ್ಪ ಹೋಗಿಬರುತ್ತೇನೆ."

ಶೈಲೇಶ ಇಲ್ಲಿಯ ತನಕ ಸುಮ್ಮನಿದ್ದ. ಕ್ಷೇತ್ರಮೋಹನ ಹೊರಟದ್ದನ್ನು ನೋಡಿ 'ಇದೇನು, ಎಲ್ಲಿಗೋ ಹೋಗುವಂತಿದೆ?' ಎಂದ.

"ನಾನು ಮೇಲೆ ಹೋಗಿ ಗೃಹಿಣಿಯನ್ನು ಸ್ವಲ್ಪ ನೋಡಿ ಬರುತ್ತೇನೆ." ಎಂದ ಕ್ಷೇತ್ರಮೋಹನ ಇನ್ನೇನು ಹೇಳಬೇಕೆಂದು ತಿಳಿಯದೆ ಹೋಗಿಬಿಟ್ಟ. ಅಲ್ಲಿಂದ ನೇರವಾಗಿ ಉಷೆಯು ಕುಳಿತ ಕೋಣೆಯ ಬಾಗಿಲಿಗೆ ಬಂದು "ಅಕ್ಕಾ, ನಮಸ್ಕಾರ" ಎಂದ.

ಉಷೆ ಮುಖ ಮೇಲೆ ಮಾಡಿ ನೋಡಿದಳು. ಹಾಗೆಯೇ ತಲೆಗೆ ಸೆರಗನ್ನೆಳೆದು ಎದ್ದು ನಿಂತಳು. ಹತ್ತಿರ ಕುಳಿತಿದ್ದ ಸೋಮೇಂದ್ರ "ಅಮ್ಮ, ಮಾವ ಬಂದ, ಮಾವ" ಎಂದು ಕೈತಟ್ಟಿ ಕೂಗಿದ.

ಉಷೆ ಅವನಿಗೆ ಹತ್ತಿರ ಇದ್ದ ಮಣೆಯ ಮೇಲೆ ಕುಳ್ಳಿರಲು ಸನ್ನೆ ಮಾಡಿದಳು. ಆಕೆಯ ಮುಂದಿನ ಕಪಾಟಿನ ಬಾಗಿಲು ತೆರೆದಿದ್ದಿತು. ನೆಲದ ಮೇಲೆ ಬಟ್ಟೆ ರಾಶಿರಾಶಿಯಾಗಿ ಹರಡಿತ್ತು. ಅದು ಎಂದಿನಿಂದ ಅಲ್ಲಿ ಬಿದ್ದಿತ್ತೋ ಯಾರು ಬಲ್ಲರು?

ಕ್ಷೇತ್ರಮೋಹನ ಮಣೆಯ ಮೇಲೆ ಕುಳಿತು "ಏನು ನಡೆಸಿರುವಿರಿ?" ಎಂದು ಕೇಳಿದ.

ಉಷೆ ಬಟ್ಟೆಗಳನ್ನು ಒಂದೊಂದಾಗಿ ಜತನದಿಂದ ಇಡುತ್ತಿದ್ದಳು. ಆಕೆಯ ಓರಣವನ್ನು ಕಂಡು ಅವನು ಚಕಿತನಾದ.

"ಇದನ್ನೇನು ಅನಾಥಾಲಯಕ್ಕೆ ಕೊಡುವ ಸಿದ್ಧತೆಯೋ, ಅಥವಾ ಹರಕು ಬಟ್ಟೆಗಳನ್ನೆಲ್ಲ ಸರಿಪಡಿಸುವುದೊ?"

ಅವನು ಉಷೆಯ ಬಗೆಗೆ ಏನೇನನ್ನೊ ಕಲ್ಪಿಸಿಕೊಂಡಿದ್ದ. ಅವಳು

ಎಷ್ಟಾದರೂ ಹಳ್ಳಿಯ ಹುಡುಗಿ, ಹೊರಗಿನವರೆದುರಿಗೆ ನಿಲ್ಲಲಾರಳು. ಆದರೆ ಅವಳ ಆಚರಣೆಯಲ್ಲಿ ಆದಾವ ರೀತಿಯೂ ಕಂಡು ಬರಲಿಲ್ಲ. ತಲೆಯೆತ್ತಿ ಅವನನ್ನು ನೋಡಲಿಲ್ಲವೆಂಬುದು ನಿಜವಾದರೂ, ಅವಳು ಯಾವ ಸಂಕೋಚವೂ ಇಲ್ಲದೆ ಸಹಜವಾಗಿಯೇ ಉತ್ತರವಿತ್ತಳು--"ಇವನ್ನೆಲ್ಲ ಸರಿಪಡಿಸಬೇಕಾಗಿದೆ. ಇನ್ನು ಹತ್ತು ವರ್ಷ ಹೊಸ ಬಟ್ಟೆ ಕೊಳ್ಳುವ ಅವಶ್ಯಕತೆಯೇ ಉಂಟಾಗಲಿಕ್ಕಿಲ್ಲ."

ಸ್ವಲ್ಪ ಹೊತ್ತು ಅವನ ಬಾಯಿಂದ ಮಾತೇ ಹೊರಡಲಿಲ್ಲ. "ಅಕ್ಕ, ಇಲ್ಲಿ ಇನ್ನಾರೂ ಇಲ್ಲ. ಆದಕ್ಕಾಗಿ ಒಂದು ಮಾತು ಹೇಳಿ ಮುಗಿಸುತ್ತೇನೆ. ನನ್ನ ಹೆಂಡತಿಯ ಗುಣವನ್ನು ಕಂಡು ನಾನೂ ಅದೇ ರೀತಿಯ ಮನುಷ್ಯನೆಂದು ಮಾತ್ರ ಊಹಿಸಬೇಡ. ನನ್ನ ಉಡಿಗೆ ತೊಡಿಗೆ ರೀತಿನೀತಿಯನ್ನು ನೋಡಿ ನಾನು ಕ್ರೈಸ್ತನೆಂದೂ ತಿಳಿಯಬೇಡ. ಇದೆಲ್ಲ ನನ್ನ ಬಾಹ್ಯರೂಪ. ಅಂತರಂಗದಿಂದ ನಾನು ಹಿಂದುವೇ ಇದ್ದೇನೆ. ಯಾರಾದರೂ ಗಂಗಾಸ್ನಾನ ಮಾಡಿದರೆ ನಾನಂತೂ ಕೈಯೆತ್ತುತ್ತಿದ್ದಿಲ್ಲ. ಇಂದು ಶೈಲೇಶನು ಸೋಮೇಂದ್ರನಿಗೆ ಹೊಡೆದುದೇನೋ ನಿಜ. ಆದರೆ ನಿಜವಾಗಿಯೂ ಅವನು ಅಂತಹ ಕೀಳು ತರಗತಿಯ ಮನುಷ್ಯನಲ್ಲ. ಮನಸ್ಸಿನಲ್ಲಿ ಅವನೂ ನೊಂದುಕೊಂಡಿರಬೇಕು "

ಉಷೆ ಏನೊಂದೂ ಉತ್ತರ ಕೊಡದೆ ಸುಮ್ಮನೆ ನಿಂತಿದ್ದಳು.

"ಅಕ್ಕಾ, ನೀವು ಕುಳಿತುಕೊಳ್ಳಿ. ನನ್ನ ಸಲುವಾಗಿ ನಿಮ್ಮ ವೇಳೆ ವ್ಯರ್ಥವಾಗುವುದು ಬೇಡ. ನಿಮ್ಮಂತಹ ಗೃಹಲಕ್ಷ್ಮಿಯರಿಂದ ನಾನೂ ಗೃಹವ್ಯವಸ್ಥೆಯ ಪಾಠ ಕಲಿಯಬೇಕಾಗಿದೆ."

ಉಷೆಯು ನಕ್ಕು "ಇವೆಲ್ಲ ಹೆಂಗುಸರ ಕೆಲಸ. ಇದನ್ನೆಲ್ಲ ನೀವು ಕಲಿತೇನು ಫಲ?" ಎಂದಳು.

"ಇದಕ್ಕೆ ಇನ್ನೆಂದಾದರೂ ಉತ್ತರ ಕೊಡುವೆ."

ಅವಳು ತನ್ನ ಕೆಲಸವನ್ನು ನಿರ್ವಹಿಸುತ್ತಿರುವಾಗಲೇ "ಇದೆಲ್ಲ ದೀನದರಿದ್ರರ ಕೆಲಸ. ತಮ್ಮಂತಹ ಮಹನೀಯರಿಗೆ ಇದರ ಆವಶ್ಯಕತೆಯೆಂದೂ ಉಂಟಾಗದು" ಎಂದಳು.

ಕ್ಷೇತ್ರಮೋಹನ ನಿಟ್ಟುಸಿರಿಡುತ್ತ — "ಅಕ್ಕಾ, ನಿಮ್ಮಂತಹರೂ ಹೀಗೆ ಅಭಿಪ್ರಾಯಪಟ್ಟರೆ ನನ್ನಂತಹ ದುಃಖಿತರ ಕಸಿವಿಸಿಯನ್ನು ಅರಿಯುವವರಾರು? ನನ್ನ ತಂಗಿಯೂ ನನ್ನ ಜೊತೆಗೆ ಬಂದಿದ್ದಾಳೆ. ಅವಳನ್ನು

ಕೆಲದಿವಸ ನಿಮ್ಮ ಬಳಿಯಲ್ಲಿಟ್ಟು ಹೋಗಲು ಮನಸ್ಸು ಹಾತೊರೆಯುತ್ತಿದೆ. ನಿಮ್ಮ ನಡತೆಯೊಳಗಿನ ಕೆಲವಂಶವನ್ನಾದರೂ ಅವಳು ಅರಿತುಕೊಂಡರೆ ಮುಂದಿನ ಜೀವನ ಸುಗಮವಾದೀತು. ”

ಅಷ್ಟರಲ್ಲಿ ಎಲ್ಲರೂ ಮಾಳಿಗೆಯೇರಿ ಬರುವ ಸದ್ದಾಯಿತು.

“ ನನ್ನ ಹೆಂಡತಿ ಮತ್ತು ನನ್ನ ತಂಗಿಯ ವೇಷಭೂಷಣಗಳ ಮೇಲಿಂದ ಅವರಿಬ್ಬರೂ ಒಂದೇ ತರಗತಿಯವರೆಂದು ಭಾವಿಸಬೇಡಿ. ”

“ ಅದು ಸ್ವಲ್ಪ ಹೊತ್ತಿನಲ್ಲೇ ತಿಳಿಯಬಹುದೆಂದು ತೋರುತ್ತದೆ. ”

“ ಆ ಶಂಕೆ ನಿಮಗೆ ಬೇಡ. ಸರಿಯಾದದ್ದನ್ನು ನೀವು ಅವಶ್ಯವಾಗಿ ಕಂಡುಹಿಡಿಯಬಲ್ಲಿರಿ. ”

## ೮

ಮೂವರೂ ಮೇಲೆ ಬಂದರು. ಉಮೆ ಹಿಂದಿದ್ದಳು. ಆವಳು ಕೋಣೆಯಲ್ಲಿ ಕಾಲಿಡುವಷ್ಟರಲ್ಲಿ ಕ್ಷೇತ್ರಮೋಹನ “ ತಂಗೀ, ಮೆಟ್ಟು ತೆಗೆದಿಟ್ಟು ಒಳಗೆ ಬಾರಮ್ಮ ” ಎಂದ.

ವಿಭೆಗೆ ಆಶ್ಚರ್ಯವಾಯಿತು—“ ಕಾಲ್ಮರೆಯನ್ನು ಹೊರಗೇಕೆ ತೆಗೆದಿಡಬೇಕು ? ”

“ ಅದರಿಂದ ಹಾನಿಯೇನಿಲ್ಲ. ಒಳಗೆ ತರುವುದರಿಂದ ಆಗುವ ಲಾಭವೂ ಅಷ್ಟರಲ್ಲೇ ಇದೆ; ಕಾಲ್ಮರೆಯಿಲ್ಲದಿದ್ದರೆ ಇಲ್ಲಿ ಮುಳ್ಳು ನೆಡುವುದಿಲ್ಲ; ಮುಗ್ಗರಿಸಿ ಬೀಳುವ ಭಯವಿಲ್ಲ. ”

“ ಅದೇನೋ ನಿಜ. ಆದರೆ ಒಮ್ಮೆಲೇ ತೆಗೆದಿಡುವ ಕಾರಣವೇನು ಬಂತು ? ”

“ ಅಕ್ಕ ಹಿಂದೂ ಸಂಪ್ರದಾಯದಲ್ಲಿ ಬೆಳೆದವಳು. ಅವಳಿಗೆ ಆ ಆಚಾರ ವಿಚಾರಗಳೇ ಮಾನ್ಯ. ಅಲ್ಲದೆ ಅವರು ಹಿರಿಯರು, ಗುರುಜನರು. ಅಂತಹರಿದ್ದಲ್ಲಿ ಕಾಲ್ಮರೆ ಹೊರಗಿಟ್ಟು ಬರುವುದೇ ಯೋಗ್ಯ. ”

ವಿಭೆ ಗಂಡನ ಕಾಲಿಗೂ ಕಾಲ್ಮರೆಯಿಲ್ಲದ್ದನ್ನು ಕಂಡಳು. ಉರಿಯುವ ಗಾಯಕ್ಕೆ ಉಪ್ಪು ಎರಚಿದಂತಾಯಿತು ಅವಳಿಗೆ. ಅವಳು—“ ಗುರುಜನರ ವಿಷಯದಲ್ಲಿರುವ ಅಪಾರವಾದ ಭಕ್ತಿಯನ್ನು ನಾನೇನು ಅರಿಯೆನೇ ? ಆದರೆ

ಆ ಸೋಗು ವಿಹಿತವಲ್ಲ. ಇದಂತೂ ಅವರು ಮಲಗುವ ಕೋಣೆ. ಅದಕ್ಕೇ ಇಷ್ಟು—ದೇವರ ಕೋಣೆಯಾಗಿದ್ದರೆ ಪಂಚಕನ್ಯ ಕುಡಿದೇ ಬರುತ್ತಿದ್ದರೋ ಏನೋ ? ” ಎಂದಳು.

“ಅಕ್ಕನ ಹೆಸರಿನಿಂದ ನಾನು ಪಂಚಕವ್ಯ ಕುಡಿಯುವುದೂ ಅಷ್ಟರಲ್ಲೇ ಇದೆ. ಇನ್ನು ದೇವರ ಮೂರ್ತಿಯೊಡನಂತೂ ನನಗಾವ ಸಂಬಂಧವೂ ಬರುವುದಿಲ್ಲ. ಅಕ್ಕ, ನಾನು ಇಲ್ಲಿ ಅನೇಕ ಸಲ ಬಂದಾಗ ಜಮಖಾನು ಕಂಡಿದ್ದೆ. ಈಗ ಅದನ್ನು ಎಲ್ಲಿಟ್ಟರಿ ? ”

“ಅದು ಇದ್ದರೆ ಕೋಣೆ ಚೊಕ್ಕಟ ಮಾಡಲಾಗುವುದಿಲ್ಲ. ಅಲ್ಲದೆ ಹೊಲಸು ಉಳಿಯುತ್ತದೆ.”

“ವ್ಹಾ, ಜಮಖಾನು ಹಾಸಿದರೆ ಕೋಣೆ ಹೊಲಸಾಗುತ್ತದೆಯಂತೆ ! ಒಳ್ಳೆಯ ವಿಚಾರ” ವಿಭೆ ವ್ಯಂಗವಾಗಿ ನುಡಿದಳು.

“ಹೌದು, ಕೋಣೆ ಹೊಲಸಾಗುತ್ತದೆ. ಹೊರಗೆ ಸ್ವಚ್ಛವಾಗಿ ಕಂಡರೂ ಆದರಡಿಯಲ್ಲಿ ದೂಳು ಮಣ್ಣು ಸೇರಿಕೊಂಡಿರುತ್ತದೆ.”

ವಿಭೆ ಉತ್ತರ ಕೊಡುವಷ್ಟರಲ್ಲಿಯೇ ಕ್ಷೇತ್ರಮೋಹನ—“ಅಕ್ಕ, ಚನ್ನಾಗಿ ಹೇಳಿದೆ ನೋಡು. ಬುಡದಲ್ಲಿ ಹೊಲಸಿದ್ದರೇನು ? ನಮ್ಮ ಕಣ್ಣಿಗೆ ಬೀಳದಿದ್ದರಾಯಿತು —ಅದೇ ಅಲ್ಲವೇ ಶೈಲೇಶ ? ”

ಶೈಲೇಶ ಮಾತಾಡಲಿಲ್ಲ. ವಿಭೆಯ ಸಿಟ್ಟಿಗೆ ನೇರೆ ಉಳಿಯಲ್ಲಿಲ್ಲ. ಆದರೂ ಅವಳು ಮೌನವಾಗಿದ್ದಳು. ಗಂಡಹೆಂಡಿರಲ್ಲಿ ವಾದವಿವಾದವಾಗುತ್ತಿದ್ದರೂ ಪ್ರೇಮಕ್ಕೇನೂ ಕೊರತೆ ಇರಲಿಲ್ಲ. ಆದರೆ ಜನರ ಮುಂದೆ ಸೋಲನ್ನೊಪ್ಪಿಕೊಳ್ಳಲು ವಿಭೆ ಸಿದ್ಧಳಿದ್ದಿಲ್ಲ. ಅದಕ್ಕಾಗಿ ಕ್ಷೇತ್ರಮೋಹನ ‘ಮಾತು ಬಂದಾಗ ಸೋತು ಹೋದವನೇ ಜಾಣ’ಎಂಬಂತೆ ವಾದ ಬೆಳೆಯುವ ಸಂದರ್ಭ ಕಂಡಾಗಲೆಲ್ಲ ತಾನೇ ಸೋತಂತೆ ಮಾಡುತ್ತಿದ್ದ. ಆದರೆ ಇಂದು ಒಮ್ಮಿಂದೊಮ್ಮೆಲೇ ಶಾಂತನಾಗಲು ಆತನ ಮನಸ್ಸು ಒಡಂಬಡಲಿಲ್ಲ. ವಿಭೆಗೂ ಗಂಡನ ಓಘ ತಿಳಿಯಿತು. ಅದಕ್ಕಾಗಿ ತಾನೂ ದೃಢಮನಸ್ಕಳಾದಳು.

ವಿಭೆ ಹೇಳಿದ್ದನ್ನೆಲ್ಲ ಸುಮ್ಮನೆ ಕೇಳಲು ಕ್ಷೇತ್ರಮೋಹನನಿಂದು ಸಿದ್ಧನಿದ್ದಿಲ್ಲ. ಅದಕ್ಕೆ ಕಾರಣವೂ ಇತ್ತು. ಹೆರವರ ಅಪರಾಧವನ್ನೇ ದೊಡ್ಡದು ಮಾಡಿ ಅವರ ಮನನೋಯಿಸುವ ಅವಳ ಸ್ವಭಾವ ಅವನಿಗೆ ಹೊಸದಲ್ಲ. ಆದರೆ ಅದರಿಂದ ಅವಳಿಗೆ ಹಾನಿಯಾಗುತ್ತಿತ್ತೇ ಹೊರತು ಹೆರವರಿಗಲ್ಲ.

ಆದರೆ ಇಂದಿನ ಅವಳ ನಡತೆಯಿಂದ ಉಷೆಗೆ ತೊಂದರೆಯಾಗುವಂತಿತ್ತು.

ಆ ನಿರಪರಾಧಿ ಮನೆಯಲ್ಲಿ ಕಾಲಿಟ್ಟಂದಿನಿಂದ ವಿಭೆ ಕೈತೊಳೆದು ಅವಳ ಬೆನ್ನುಹತ್ತಿದ್ದಳು. ಉಷೆ ಒಂದು ರೀತಿಯಿಂದ ದುರ್ದೈವಿ. ಯಾರದೋ ತಪ್ಪಿಗಾಗಿ ಅವಳು ತನ್ನ ಮನೆಗೆ ಎರವಾಗಿ ದಾರುಣ ದುಃಖಕ್ಕೀಡಾಗಿದ್ದಳು. ಈಗ ಯಾವ ಪುಣ್ಯದಿಂದಲೋ ತುಸು ಆಸರೆ ದೊರೆತಿದೆಯೆನ್ನುವಷ್ಟರಲ್ಲಿ ಇವಳ ಕಾಟ. ಇದರಿಂದ ಯಾರಿಗೆ ತಾನೇ ಸಿಟ್ಟು ಬರಲಿಕ್ಕಿಲ್ಲ ? ಕ್ಷೇತ್ರಮೋಹನ ಮದುವೆಯಾದ ಮನುಷ್ಯ, ಗಂಡನ ಕರ್ತವ್ಯಕರ್ಮವನ್ನು ಬಲ್ಲವನು. ಶೈಲೇಶ ಉಷೆಗೆ ಅಪರಾಧ ಮಾಡಿದ್ದಾನೆ—ಅವಳೊಡನೆ ಸರಿಯಾಗಿ ವ್ಯವಹರಿಸಿಲ್ಲ—ಎಂದು ಅವನಿಗೆ ಗೊತ್ತು. ಈಗೇನೋ ಕರ್ತವ್ಯಪರಾಯಣನಾಗುತ್ತಿರುವ ಸೂಚನೆ ಕಂಡುಬರುತ್ತಿರುವಾಗ ಅದಕ್ಕೆ ಕಲ್ಲುಹಾಕುತ್ತಿರುವುದನ್ನು ಕಂಡು ಕ್ಷೇತ್ರಮೋಹನನಿಗೆ ತಾಳ್ಮೆ ಉಳಿಯಲಿಲ್ಲ. ಆದರಿಂದ ಅವನು ಸಿಟ್ಟುಬೆಂಕಿಯಾದ. ಈ ಸಿಟ್ಟಿಗೆ, ಉಷೆಯ ಪಾದಧೂಲಿಯ ಯೋಗ್ಯತೆಯೂ ವಿಭೆಗೆ ಇಲ್ಲವೆಂಬ ಅಂತರಂಗದ ಕಾರಣವೂ ಇದ್ದಿರಬಹುದು.

ಅಂತೂ ವಿಭೆಯನ್ನು ಈಗ ಕ್ಷಮಿಸುವುದು ಉಚಿತವಲ್ಲವೆಂದು ಭಾವಿಸಿದರೂ ಎಲ್ಲರ ಎದುರು ಒಮ್ಮೆಲೇ ಅವಳನ್ನು ಅವಮಾನಿಸುವುದು ಯೋಗ್ಯವಲ್ಲವೆಂದು ಸುಮ್ಮನಾಗಲು ಯತ್ನಿಸಿದ. ಅಲ್ಲದೆ ತನ್ನ ಈ ಮನೋಭಾವನೆಯನ್ನು ತೋರ್ಪಡಿಸುವ ಮನಸ್ಸೂ ಅವನಿಗಿರಲಿಲ್ಲ. ಅದರಿಂದ ತಂಗಿಯನ್ನು ಕುರಿತು “ಉಮಾ, ಈ ಗ್ರಾಮೀಣ ಅಕ್ಕನ ಜೊತೆಗೆ ಸಾಯಂಕಾಲ ಒಂದೆರಡು ಗಳಿಗೆ ಕಳೆದರೆ ಎಷ್ಟೋ ಒಳಿತಾದೀತು. ಎಂತಹ ಪರಿಸ್ಥಿತಿಯಲ್ಲಿಯೂ ಅದು ಪ್ರಯೋಜನವಾದೀತು ” ಎಂದನು.

ಉಮೆಯು ನಸುನಕ್ಕು ಸುಮ್ಮನಿದ್ದಳು. ಆಗ ಉಷೆಯೇ “ ಆಯಿತು. ಆಗಂತೂ ಕೇಳುವುದೇ ಬೇಡ. ಆಕೆ ನನ್ನ ಜೊತೆಗೆ ಬಂದು ಇರತೊಡಗಿದಳೆಂದರೆ ನಿಮ್ಮಂತಹ ಸುಧಾರಿಸಿದ ಸಮಾಜದಲ್ಲಿ ಅವಳಿಗೆ ಕುಳ್ಳಿರಲಿಕ್ಕೂ ಸ್ಥಳ ದೊರೆಯದು. ಅವಳು ಹೊರಗೇ ಬೀಳಬೇಕಾದೀತು ” ಎಂದಳು.

“ ಹೊರಬಿದ್ದರಾದರೂ ಹಾನಿಯೇನು ಅಕ್ಕ ? ಕೊನೆಯ ಪಕ್ಷಕ್ಕೆ ಅವಳ ಹಾಗೂ ಅವಳ ಗಂಡನ ಜೀವನವಾದರೂ ಸುಖಮಯವಾಗಿ ಸಾಗುವುದು. ಹೆಚ್ಚೇನು ? ಈಗ ನಾವು ಮಾಡುತ್ತಿರುವ ಕೆಲಸವನ್ನಷ್ಟೇ ಸರಿಯಾಗಿ ತಿಳಿದುಕೊಂಡರೂ ದಿನವೂ ಹೊಸ ಹೊಸ ಬಟ್ಟೆಗಳಿಗಾಗಿ ಗಂಡನನ್ನು ಕಾಡುವು

ದಾದರೂ ಉಳಿದೀತು. ಕುಶಲನಾದ ನಾವಿಕನು ನೀರನ್ನು ನೋಡಿದೊಡನೆಯೇ ಆದರ ಆಳವನ್ನು ತಿಳಿಯುವಂತೆ, ನೀವು ಇಲ್ಲಿಯ ಸ್ಥಿತಿಯನ್ನು ಅಳೆದು ಬಿಟ್ಟಿರುವಿರಿ—ತುಸು ಅಜಾಗರೂಕತೆಯಿಂದ ವರ್ತಿಸಿದರೂ ಹಡಗು ಮುಳುಗೀತೆಂದು ನೀವು ಕಂಡುಕೊಂಡಿರಿ. ಅದಕ್ಕಾಗಿ ನಿಮಗೆ ನಾನು ನನ್ನ ಪರವಾಗಿಯೂ, ಶೈಲೇಶನ ಪರವಾಗಿಯೂ ಕೃತಜ್ಞತೆಗಳನ್ನರ್ಪಿಸಲು ಬಯಸುತ್ತೇನೆ."

ಉಷೆಗೆ ನಾಚಿಕೆಯೆನಿಸಿತು—"ನಮ್ಮ ಮನೆಯ ಸ್ಥಿತಿಯನ್ನು ನಾನು ಅರಿತುಕೊಳ್ಳಲು ಬಯಸಿದ್ದಕ್ಕೆ ನನಗೇಕೆ ಧನ್ಯವಾದಗಳು ? "

ಇಲ್ಲಿಯ ವರೆಗೆ ಹೇಗೋ ಸುಮ್ಮನಿದ್ದ ವಿಭೆಗೆ ಈಗ ತಡೆಯಲಾಗಲಿಲ್ಲ. ಅವಳು "ನಿಮ್ಮ ಹೆಂಡತಿಯನ್ನು ಅಪಮಾನ ಮಾಡುವ ಉದ್ದೇಶದಿಂದಲೇ ಈ ಮಾತು ಆಡಿದ್ದು. ಅಲ್ಲದೆ, ಹೆರರ ಗದ್ದೆಯಲ್ಲಿ ಬಿದ್ದ ಕಾಳನ್ನಾರಿಸುವವರನ್ನು ಹೊಗಳುವ ಈ ಪರಿಗೆ ಏನೆನ್ನಬೇಕೋ ತಿಳಿಯದು" ಎಂದಳು.

ಕ್ಷೇತ್ರಮೋಹನನಿಂದ ತಡೆಯುವುದಾಗಲಿಲ್ಲ. ಅವನು "ವಿಭಾ ರಾಣಿಯವರೇ, ಮನೆಯನ್ನು ಸುಸ್ಥಿತಿಗೆ ತರಲು ಯತ್ನಿಸಿದರೆ ಭಿಕ್ಷುಕರಾಗುತ್ತಾರೆಯೇ ? ಇಂತಹ ಮಾತು ಯೋಗ್ಯರ ಬಾಯಿಂದ ಎಂದೂ ಹೊರಡದು. ಗಂಡ ಹೆಂಡಿರಲ್ಲಿ ಮನಸ್ತಾಪ ಹುಟ್ಟಿಸುವ ಈ ಪ್ರಯತ್ನಕ್ಕೆ ಏನು ಹೆಸರೋ ಯಾರು ಬಲ್ಲರು ? " ಎಂದ.

ವಿಭೆಯ ಮುಖದಿಂದ ಉತ್ತರವೇ ಹೊರಡಲಿಲ್ಲ. ಏನೂ ತೋಚದ್ದರಿಂದ ಗಂಡನ ಕಡೆಗೊಮ್ಮೆ ನೋಡಿದಳು. ಇಷ್ಟೆಲ್ಲ ಜನರೆದುರಿಗೆ ತನ್ನ ಗಂಡ ಹೀಗೆ ಹೇಳಬಹುದೆಂದು ಆಕೆ ಎಣಿಸಿರಲಿಲ್ಲ. ಆ ಮೇಲೆ ಗೊಳೋ ಎಂದು ಅಳುತ್ತ "ಅಣ್ಣಾ, ಇನ್ನು ಮುಂದೆ ಎಂದೂ ನಿಮ್ಮ ಮನೆಯ ಹತ್ತರ ಬರುವುದಿಲ್ಲ" ಎಂದಳು.

ಶೈಲೇಶ ವ್ಯಾಕುಲಗೊಂಡ. ಉಷೆಯೂ ಹಿಡಿದ ಕೆಲಸ ಬಿಟ್ಟು ಕಾತರಳಾಗಿ ನಿಂತಳು. ಆ ಮೇಲೆ ವಿಭೆಯ ಕೈಹಿಡಿದು "ಅತ್ತಿಗೇ, ನಾವು ಯಾರೂ ನಿನಗೆ ಹಾಗೆ ಹೇಳಲಿಲ್ಲ" ಎಂದಳು.

ಇಷ್ಟರಲ್ಲಿ ಅಪ್ರಿಯವಾದ ಘಟನೆಯೊಂದು ನಡೆಯಿತು. ಹೀಗೆ ಮಾತಾಗುತ್ತಿರುವಾಗಲೇ ಕ್ಷೇತ್ರಮೋಹನ ಅಲ್ಲಿಂದ ಜಾರಿದ. ಈಗ ವಿಭೆಯನ್ನು ತಡೆಯುವವರು ಇನ್ನು ಯಾರೂ ಉಳಿಯಲಿಲ್ಲ.

"ನಿನ್ನ ಮೇಲೆ ನಾನು ಹಗೆಕಟ್ಟುತ್ತಿರುವಾಗ ನಾನಿಲ್ಲಿ ಬರುವುದು ಸರ್ವಥಾ ಯೋಗ್ಯವಲ್ಲ."

"ಅತ್ತಿಗೇ, ಕನಸಿನಲ್ಲಿಯೂ ನಾನು ಹೀಗೆ ಯೋಚಿಸಿರಲಿಲ್ಲ."

ಬೇರೆಯವರ ಮಾತನ್ನು ಕಿವಿಗೆ ಹಾಕಿಕೊಳ್ಳುವಷ್ಟು ತಾಳ್ಮೆ ಅವಳಿಗಿರಲಿಲ್ಲ— "ಇಂದು ಇವರು ಹೇಳಿದರು. ನಾಳೆ ಅಣ್ಣನೇ ಹೇಳಬಹುದು. ಆದ್ದರಿಂದ ಇಲ್ಲಿ ಮಾತಾಡುವುದೆಂದರೆ ಅಪಮಾನವನ್ನು ಉಡಿಯಲ್ಲಿ ಹಾಕಿಕೊಂಡಂತೆ. ಉಮಾ, ಏಳು ಮನೆಗೆ ಹೋಗುವಾ, ನಡೆ. ಯಜಮಾನಿ ಕರೆಯದೇ ಇಲ್ಲಿ ಕಾಲು ಹಾಕಿದುದೇ ತಪ್ಪು. ತಾಯಿಯ ಮನೆಯೆಂದಿದ್ದ ಅಲ್ಪ ಸ್ವಲ್ಪ ನಂಟುತನವೂ ಇಂದಿನಿಂದ ದೂರವಾಯಿತು."

ಅವಳು ಮಾಳಿಗೆಯಿಂದ ಇಳಿದು ಬಂದಳು. ಶೈಲೇಶನೂ ಹಿಂಬಾಲಿಸಿದ. ಆದರೆ ಆತನಿಗೆ ತುಂಬಾ ಸಂಕೋಚವಾಗಿತ್ತು. "ವಿಭಾ, ತುಸು ತಡೆ. ನನ್ನ ಲೈಬ್ರರಿ ಕೋಣೆಯಲ್ಲಿ ಕುಳಿತುಕೋ" ಎಂದ.

"ಉಹುಂ. ನಾನೀಗ ಕುಳ್ಳಿರಲಾರೆ. ಅಣ್ಣಾ, ನಿನ್ನ ಹಿಂದಿನ ಹೆಂಡತಿಯನ್ನು ಮಾತ್ರ ಮರೆಯಬೇಡ. ಸೋಮೇಂದ್ರ ವಿಲಾಯತಿಗೆ ಹೋಗಿ ಬರಬೇಕೆಂದು ಅವಳ ಆಸೆಯಿತ್ತು. ಅಣ್ಣಾ, ನಿನ್ನ ಕಾಲಿಗೆ ಬೀಳುತ್ತೇನೆ. ಅವನ ಜೀವನ ಹಾಳುಮಾಡಬೇಡ. ಇಂದು ನಾವು ನೋಡಿದಂತಹ ಶಿಕ್ಷಣವೇ ಅವನಿಗೆ ದೊರೆಯುವ ಶಿಕ್ಷಣವಾದರೆ ನನಗೆ ಎಲ್ಲಿಯೂ ಮೋರೆ ತೋರಿಸಲು ಇಂಬಿಲ್ಲದೆ ಹೋದೀತು."

ಹೆಣ್ಣಿನ ಕಂಬನಿಗೆ ಕರಗದ ಮಾನವನಾರು? ಅದರಲ್ಲಿಯೂ ಒಡಹುಟ್ಟಿದ ತಂಗಿ. "ವಿಭಾ, ನೀನು ಹೀಗೆ ಹೊರಟುಹೋದರೆ ನನಗೆಷ್ಟು ನೋವಾದೀತೆಂದಾದರೂ ಊಹಿಸಿರುವೆಯಾ? ತುಸು ತಡೆ" ಎಂದ ಅವನು.

ವಿಭೆಗೆ ಇನ್ನೊಮ್ಮೆ ದುಃಖ ಒತ್ತರಿಸಿ ಬಂದಿತು. ಸೋಮೇಂದ್ರನ ಭವಿಷ್ಯ ಚಿಂತನೆಯಿಂದಲೋ ಅಥವಾ ಇನ್ನಾವ ಕಾರಣದಿಂದಲೋ ಯಾರು ಬಲ್ಲ? ಅವಳು ಕಣ್ಣನ್ನೊರಸಿ "ಅಣ್ಣಾ, ನನಗಿನ್ನಾವ ಕೋಣೆಯಲ್ಲಿಯೂ ಕುಳ್ಳಿರುವ ಬಯಕೆಯಿಲ್ಲ. ಆದರೆ ನಮ್ಮ ತಂದೆಯ ವಂಶಾಧಾರನೆಂದರೆ ಸೋಮೇಂದ್ರನೊಬ್ಬನೇ ಒಬ್ಬ. ಅವನನ್ನು ಮಾತ್ರ ಚನ್ನಾಗಿ ನೋಡಿಕೊ" ಎಂದು ತನ್ನ ಮೋಟರು ಏರಿದಳು. ಉಮೆಯೂ ಸುಮ್ಮನೆ ಅವಳ ಬಳಿ ಹೋಗಿ ಕುಳಿತಳು.

"ವಿಭಾ, ಸೋಮೇಂದ್ರನನ್ನು ನಿನ್ನೊಡನೆಯೇ ಕರೆದುಕೊಂಡು ಹೋಗು.

ನಿನಗೂ ಮಕ್ಕಳಿಲ್ಲ. ಇವನೇ ಮಗನೆಂದು ತಿಳಿದು ಒಬ್ಬ ಮನುಷ್ಯನನ್ನಾಗಿ ಮಾಡು" ಎಂದು ಶೈಲೇಶನೇ ಕೇಳಿಕೊಂಡ.

"ಅಣ್ಣಾ, ಇಂತಹ ಆಗದ ಹೋಗದ ಮಾತುಗಳನ್ನೇಕೆ ಆಡುವೆ? ಹಾಗೆ ಮಾಡಲು ನಿನಗೆ ಸಾಧ್ಯವೂ ಇಲ್ಲ."

"ಏಕೆ ಸಾಧ್ಯವಿಲ್ಲ? ತಂಗೀ, ನಿನಗೆ ಇದನ್ನು ಸತ್ಯವೆಂದು ಮಾಡಿಯೇ ತೋರಿಸುವೆ."

"ಹಾಗೆ ಮಾಡಿದರಂತೂ ಒಳಿತೇ ಆಯಿತು. ಆತನ ಉಚ್ಚ ಶಿಕ್ಷಣಕ್ಕಾಗಿ ವೆಚ್ಚಮಾಡಲು ನಿನ್ನಲ್ಲಿ ಹಣವಿಲ್ಲದಿದ್ದರೆ ನಾನೇ ಆ ಭಾರವನ್ನು ಹೊರುವೆ."

ಆವಳ ದೃಷ್ಟಿ ಹೊರಕ್ಕೆ ಹೊರಳಿದಾಗ ತಮ್ಮನ್ನೇ ನೋಡುತ್ತ ಹೊಸ್ತಿಲ ಹತ್ತಿರ ನಿಂತ ಉಷೆಯು ಕಣ್ಣಿಗೆ ಬಿದ್ದಳು. ಕೆಲ ನಿಮಿಷದಲ್ಲಿಯೇ ಮೋಟರು ಹೊರಟಿತು. ಆ ಮೇಲೆ ಶೈಲೇಶ ತನ್ನ ಓದುವ ಕೋಣೆಯಲ್ಲಿ ಹೋಗಿ ಕುಳಿತ. ಮೇಲೆ ಹೋಗುವ ಮನಸ್ಸಾಗಲಿ ಸಾಹಸವಾಗಲಿ ಅವನಿಗೆ ಇರಲಿಲ್ಲ. ತಮ್ಮ ಮಾತನ್ನೆಲ್ಲ ಉಷೆಯು ಕೇಳಿರುವಳೆಂದು ಅವನಿಗೆ ಖಾತ್ರಿಯಾಗಿತ್ತು.

೬

ಉಷೆಯು ರಾತ್ರಿ ಊಟಕ್ಕೆ ಬರಲು ಗಂಡನಿಗೆ ಹೇಳಿಕಳಿಸಿದಳು. ದಿನಾಲು ಕುಳ್ಳಿರುವ ಸ್ಥಳದಲ್ಲಿಯೇ ಅವಳು ಕೂತಿದ್ದಳು. ಆದರೆ ಸೋಮೇಂದ್ರನು ಮಾತ್ರ ಹತ್ತಿರ ಇರಲಿಲ್ಲ. ಅವನು ಮಲಗಿರಬೇಕು. ಶೈಲೇಶ ಬಂದ. ಅವನ ಮೋರೆ ಗಂಭೀರವಾಗಿತ್ತು. ಬೇಕೆಂತ ಮಾತು ಬೆಳೆಸುವುದು ಉಷೆಗೆ ಒಗ್ಗದು. ಅದಕ್ಕಾಗಿ ಇಂದಿನ ಘಟನೆಯ ಪ್ರಸ್ತಾಪವನ್ನು ತಾನಾಗಿ ಎತ್ತಲಿಲ್ಲ. ತನಗೆ ಗೊತ್ತಿಲ್ಲದೆ ನಡೆದಿರಬಹುದಾದ ಘಟನೆಗಳನ್ನು ತಿಳಿದುಕೊಳ್ಳಲಿಕ್ಕೂ ಅವಳು ಕುತೂಹಲ ತೋರಿಸಲಿಲ್ಲ. ಅವಳ ಈ ಸ್ವಭಾವ ಶೈಲೇಶನಿಗೆ ಅಪರಿಚಿತವಾದುದೇನೂ ಅಲ್ಲ.

ಶೈಲೇಶ ಊಟಕ್ಕೆ ಕುಳಿತಾಗ ಮನದಲ್ಲಿಯೇ ಮುನಿದ. ಅವಳ ಮನೋಭಾವವನ್ನು ಕದ್ದು ನೋಡಲು ಹವಣಿಸಿದ. ಅವಳು ಎಂದಿನಂತೆ ಕುಳಿತಿದ್ದ

ಳಾದರೂ, ಬೇಕೆಂತಲೇ ದೀಪದ ಬದಿಗೆ ಮೋರೆಮಾಡಿ ಕುಳಿತಿರುವಳೆಂದು ಕಲ್ಪಿಸಿದ. ದಿನದಂತೆ ಸಹಜವಾಗಿ ಊಟಮಾಡಲು ಅವನಿಂದಾಗಲಿಲ್ಲ. ಉಷೆ "ಇದೇನು, ಇಂದು ಊಟ ಸರಿಯಾಗಿ ಮಾಡುತ್ತಿಲ್ಲವಲ್ಲ?" ಎಂದು ಕೇಳಿದಾಗ "ದಿನವೂ ಒಂದೇ ಮಾದರಿ ಆದರೆ ಒಮ್ಮೊಮ್ಮೆ ಬೇಸರ ಬರುತ್ತದೆ" ಎಂದು ಹಾರಿಸಿ ನುಡಿದ. ಆದರೆ ಕಾರಣ ಬೇರೆಯೇ ಇತ್ತು. ಇದು ನಿಜವಾದ ಕಾರಣವಲ್ಲವೆಂದು ಉಷೆಗೆ ಎನಿಸಿದರೂ ಅವಳು ತರ್ಕ ಮಾಡಲು ಹೋಗಲಿಲ್ಲ.

ಪ್ರತ್ಯುತ್ತರ ಕೊಡದೆ ಸೋಲನ್ನೊಪ್ಪಿಕೊಂಡಲ್ಲಿ ಇದಿರು ಪಕ್ಷದ ಗಂಟಲು ದೊಡ್ಡದಾಗುವುದು ಸ್ವಾಭಾವಿಕ. ಅದರಂತೆ ಊಟಮಾಡಿ ಶೈಲೇಶ ಹೊರಗೆ ಬರುತ್ತಿರುವಾಗ "ನಾವೆಲ್ಲರೂ ಒಮ್ಮೆ ನಿನಗೆ ಅನ್ಯಾಯ ಮಾಡಿದ್ದೇವೆಂಬುದು ನಿಜ. ಅದರ ಪರಿಮಾರ್ಜನೆಗಾಗಿ ಸರ್ವಾಧಿಕಾರವನ್ನೂ ನಿನಗೇ ಒಪ್ಪಿಸಿದ್ದಾರೆಂದು ಮಾತ್ರ ತಿಳಿಯಬೇಡ" ಎಂದ.

ಈ ಮನೆಗೆ ಮೊಟ್ಟಮೊದಲು ಕಾಲೂರಿದಾಗಲೂ ಅವಳು ಇಂತಹ ಕಟುಮಾತನ್ನು ಕೇಳಿರಲಿಲ್ಲ. ಅದರಿಂದ ಅವಳಿಗೆ ಆಶ್ಚರ್ಯವಾಯಿತು. "ಇದು ನನಗೇನೂ ತಿಳಿಯಲಿಲ್ಲ" ಎಂದಳು.

ಅವಳು ಅದನ್ನು ವಿನಯದಿಂದ ಹೇಳಿದಳಾದರೂ ಆತನ ಸಿಟ್ಟು ಕಡಿಮೆಯಾಗಲಿಲ್ಲ.

"ಈ ಮಾತು ನಿನಗೆ ತಿಳಿದಿರಬೇಕಿತ್ತು. ನಮ್ಮ ಶಿಕ್ಷಣ, ಸಮಾಜ, ಸಂಸ್ಕಾರಗಳನ್ನೆಲ್ಲ ಪರಿತ್ಯಜಿಸಿ ನಿಮ್ಮ ತಂದೆಯ ಮನೆಯಂತೆ ಇದನ್ನು ಕರ್ಮಠರ ಮನೆಯನ್ನಾಗಿ ಮಾರ್ಪಡಿಸಿದರೆ ನಮಗೆ ಸಮಾಜದಲ್ಲಿ ತಲೆಯೆತ್ತಿ ತಿರುಗಲು ಅಸಾಧ್ಯವಾದೀತು. ನಾನು ಸೋಮೇಂದ್ರನನ್ನು ಅವನ ಅತ್ತೆಯ ಮನೆಗೆ ಕಳಿಸಬೇಕೆಂದಿದ್ದೇನೆ. ಇದಕ್ಕೆ ನಿನ್ನ ಅಭಿಪ್ರಾಯವೇನು?"

"ಎಲ್ಲಿಯಾದರೂ ಅವನ ಹಿತವಾದರೆ ಸಾಕು."

ಅವಳು ಇದನ್ನು ಸಹಜವಾಗಿಯೇ ಹೇಳಿದಳು. ಅದರಲ್ಲಾವ ವ್ಯಂಗ್ಯವೂ ಇರಲಿಲ್ಲ. ಅದರಿಂದ ಶೈಲೇಶನ ಸಂಕಲ್ಪದಲ್ಲಿ ಕೊಂಚ ವಿಕಲ್ಪವುಂಟಾಯಿತು. ಸೋಮೇಂದ್ರನ ಹಿತ ಯಾವ ರೀತಿಯಿಂದ ಸಾಧಿಸೀತೆಂಬ ಬಗೆಗೆ ನಿಶ್ಚಿತವಾದ ಯೋಜನೆ ಅವನ ಮುಂದಿರಲಿಲ್ಲ. ದುರ್ಬಲ ಮನಸ್ಸಿನ ಮನುಷ್ಯರ ಅವಸ್ಥೆಯೇ ಹೀಗೆ. ಇಂಥವರು ಕಾಲ್ಪನಿಕ ಮನೋವ್ಯಥೆಯ ಮೂಲಕ ಇಲ್ಲವೆ

ಅಸಂಗತ ಅಭಿಮಾನದ ಮೂಲಕ ಒಮ್ಮೆಲೇ ರೇಗುವರು. ಆ ಮೇಲೆ ಸಾವಕಾಶವಾಗಿ ಬುದ್ಧಿಯು ಸ್ತಿಮಿತಕ್ಕೆ ಬರತೊಡಗಿದಂತೆ ಪಶ್ಚಾತ್ತಾಪ ಪಡುತ್ತಾರೆ.

ಶೈಲೇಶ ಕೆಲಹೊತ್ತಿನಮೇಲೆ "ಅವನು ಅಲ್ಲಿಯೇ ಇರುವುದು ಒಳಿತೆಂದು ಜನರ ಅಭಿಪ್ರಾಯವಿದೆ. ನಮ್ಮ ನಿಮ್ಮ ರೀತಿನೀತಿಗಳಲ್ಲಿ ಅಜಗಜಾಂತರವಿದೆ. ಅದಕ್ಕಾಗಿ ಅಣ್ಣತಂಗಿಯರಲ್ಲಿ ಜಗಳಕ್ಕೆ ಕಾರಣವಾಗಿ ಜನರಲ್ಲಿ ಹಾಸ್ಯಕ್ಕೆಡೆಯಾಗಿದೆ. ಅದು ನನಗೆ ಒಗ್ಗುವುದಿಲ್ಲ" ಎಂದ.

ಇದಕ್ಕೆ ಪ್ರತಿಹೇಳುವುದು ಉಷೆಗೆ ಸರಿಯೆನಿಸಲಿಲ್ಲ. ಅವಳು ತನ್ನದೇ ಸರಿಯೆಂದು ವಾದಿಸಲು ಹೋಗಲಿಲ್ಲ. ಆದರೆ ಅವಳ ಮುಖದಿಂದ ನಿಟ್ಟುಸಿರೊಂದು ಹೊರಬಿತ್ತು. ಕೋಣೆಯಲ್ಲಿ ಸ್ತಬ್ಧತೆ ಇದ್ದುದರಿಂದ ಅದು ಶೈಲೇಶನಿಗೂ ಕೇಳಿಸಿತು. ವಿಭೆಯೊಡನೆ ನಡೆದ ವಾದವಿವಾದದಲ್ಲಿ ಆವಳ ಅಂಗವಿರಲಿಲ್ಲ; ಅವಳು ಯಾವ ಮಾತೂ ಆಡಿರಲಿಲ್ಲ.

ಶೈಲೇಶನೇ ಮಾತು ಮುಂದುವರಿಸಿದ— "ವಿಲಾಯತಿಯಲ್ಲಿದ್ದು ಶಿಕ್ಷಣ ಪಡೆಯಬೇಕಾದವನು ಅಲ್ಲಿಯ ಶಿಷ್ಟಾಚಾರಗಳನ್ನೆಲ್ಲ ಇಲ್ಲಿ ಮೊದಲಿಗೆ ಕಲಿತುಕೊಳ್ಳಬೇಕಾಗುತ್ತದೆ. ಅವನು ಅಂತಹ ವಾತಾವರಣದಲ್ಲಿಯೇ ಬೆಳೆಯಬೇಕಾಗುತ್ತದೆ. ಇಂದಿನ ಮಕ್ಕಳಿಗೆ ಮುಂದಿನ ಜೀವನಕ್ಕೆ ಸಹಕಾರಿಯಾಗುವ ಶಿಕ್ಷಣ ಕೊಡಿಸದಿದ್ದರೆ ನಾವು ದೊಡ್ಡ ಅನ್ಯಾಯ ಮಾಡಿದಂತಾದೀತು. ಅವರು ಚನ್ನಾಗಿ ಬೆಳೆಯುವಂತೆ ಮಾಡುವುದೇ ತಂದೆತಾಯಿಗಳ ಕರ್ತವ್ಯ."

ಇಷ್ಟು ಹೇಳಿ ಕ್ಷಣಕಾಲ ತಡೆದ. ಆದರೂ ಉಷೆಯು ಮಾತಾಡಲಿಲ್ಲ. ಹೀಗಾಗಿ ಶೈಲೇಶನೇ ಮತ್ತೆ ಮುಂದುವರಿಸಬೇಕಾಯಿತು—"ಈ ವಿಷಯದಲ್ಲಿ ನೀನೇನೂ ಹೇಳುವುದಿಲ್ಲವಾದರೆ ಸರಿ. ಆದರೆ ಬರೇ ನಿಟ್ಟುಸಿರಿಟ್ಟು ಕುಳಿತರೆ ನಿನ್ನ ಅಭಿಪ್ರಾಯ ಹೇಗೆ ಗೊತ್ತಾಗಬೇಕು? ಸೋಮೇಂದ್ರನ ಬಗೆಗೆ ನಾವು ತುಂಬಾ ಯೋಚಿಸಿಯೇ ಈ ನಿರ್ಣಯಕ್ಕೆ ಬಂದಿದ್ದೇವೆ."

ಸೋಮೇಂದ್ರ ಹತ್ತಿರವೇ ಮಲಗಿದ್ದ. ಮನೆಯಲ್ಲಿ ಇನ್ನಾವ ಹೆಂಗಸೂ ಇಲ್ಲದ್ದರಿಂದ ಉಷೆಯು ಅವನನ್ನು ತನ್ನ ಜೊತೆಗೇ ಮಲಗಿಸಿಕೊಳ್ಳುತ್ತಿದ್ದಳು. ಅವಳು ವಾತ್ಸಲ್ಯದಿಂದ ಮಗುವಿನ ತಲೆಯ ಮೇಲೆ ಕೈಯಾಡಿಸುತ್ತ— "ಅವನ ಹಿತಕ್ಕೆ ನಾನೇಕೆ ಅಡ್ಡಬರಲಿ?" ಎಂದಳು.

"ಅಷ್ಟೇ ಅಲ್ಲ; ವಿಭೆ ಸೋಮೇಂದ್ರನ ಶಿಕ್ಷಣದ ಎಲ್ಲ ಹೊಣೆ ಹೊರಲು ಸಿದ್ಧಳಾಗಿದ್ದಾಳೆ. ಇದೇನೂ ಸಣ್ಣ ಮಾತಲ್ಲ."

ಉಷೆಗೆ ರೇಗುವುದೇ ಗೊತ್ತಿರಲಿಲ್ಲ. ಗದರುವುದೂ ಒಗ್ಗುತ್ತಿರಲಿಲ್ಲ. ಯಾವಾಗಲೂ ಶಾಂತಸ್ವಭಾವದವಳು. ಅವಳು "ಯಾರೊಬ್ಬರ ದಯೆಯಿಂದ ನಮ್ಮ ಹುಡುಗ ಕಲಿಯಬೇಕಾಗಿಲ್ಲ. ಅವರ ವೆಚ್ಚದಿಂದ ಕಲಿಯುವುದಾದರೆ ನಾನು ಹುಡುಗನನ್ನು ಕಳಿಸುವುದೇ ಇಲ್ಲ" ಎಂದಳು.

"ವಿಲಾಯತಿಗೆ ಕಳಿಸುವುದಾದರೆ ಬಹಳ ಹಣ ಬೇಕಲ್ಲ! ಏನು ಮಾಡುವುದು ?"

"ಅವಶ್ಯಕತೆ ಉಂಟಾದಾಗ ನೋಡಿದರಾಯಿತು. ಈಗ ರಾತ್ರಿಯಾ-ಯಿತು, ಮಲಗಿಕೊಳ್ಳಿ."

ಮಾರನೇ ದಿನ ಶೈಲೇಶ ಕಾಲೇಜು, ಆ ಮೇಲೆ ಕ್ಲಬ್ಬು, ಮುಗಿಸಿ ಮನೆಗೆ ಮರಳುತ್ತಿರುವಾಗ ಅಡಿಗೆಮನೆಯಿಂದ ಹೊರಡುತ್ತಿದ್ದ ಸುವಾಸನೆಯಿಂದ ಬಾಯಲ್ಲಿ ನೀರೂರಿತು. ಅವನು ಮನಸ್ಸಿನಲ್ಲಿಯೇ ಚಕಿತನಾಗಿ, ತನ್ನ ಓದುವ ಕೋಣೆಗೆ ಹೋದ. ಕೊಂಚ ಹೊತ್ತಿನಲ್ಲಿ ಒಬ್ಬ ಮುಸಲ್ಮಾನನು ಬಂದು ಫಲಾಹಾರಕ್ಕೆ ಅಣಿಮಾಡಿಟ್ಟು ಹೋದ.

ರಾತ್ರಿ ಊಟಕ್ಕೆ ಹೋದಾಗ ಹಿಂದಿನ ರಾತ್ರಿಯಂತಿರಲಿಲ್ಲ. ಮೇಜಿನ ಮೇಲೆ ಎಲ್ಲವನ್ನೂ ಸಿದ್ಧಪಡಿಸಿದ್ದರು. ಶೈಲೇಶನಿಗೂ ಇದೇ ರೀತಿಯ ಭೋಜನ ಬೇಕಾಗಿತ್ತು. ಕೆಲಹೊತ್ತಿನಲ್ಲಿ ಉಷೆಯು ಬಂದು ಬಳಿಯಲ್ಲಿದ್ದ ಕುರ್ಚಿಯನ್ನೆಳೆದುಕೊಂಡು ಕುಳಿತಳು.

ಶೈಲೇಶ ಆಗ ಪ್ರಸನ್ನನಾದ— "ಇಲ್ಲಿ ಬಂದರೆ ನಿನ್ನ ಜಾತಿಯೇನೂ ಹೋಗಲಾರದು. ವಾಸನೆ ತೆಗೆದುಕೊಂಡರೂ ಅರ್ಧ ಊಟಮಾಡಿದಂತೆ ಎಂದು ಶಾಸ್ತ್ರಕಾರರ ಅಭಿಪ್ರಾಯವಿದೆ."

"ನಿಮಗೆ ಶಾಸ್ತ್ರಾಧಾರ ಹೇಳುವ ಹಕ್ಕಿಲ್ಲ. ಏಕೆಂದರೆ ನೀವೆಲ್ಲಿ ಶಾಸ್ತ್ರವನ್ನು ಒಪ್ಪುತ್ತೀರಿ?"

"ಆಗಲಿ, ನಾನೇ ಸೋತೆ. ನಿನ್ನೆ ನಿನಗೆ ಸ್ವಲ್ಪ ಗದ್ದರಿಸಿದ್ದರಿಂದ ನನಗೆ ಇಂದು ಇಂತಹ ಊಟ ಸಿಕ್ಕಿತು, ಅಲ್ಲವೇ ಉಷಾ? ಆದರೆ ಇದರಿಂದ ವೆಚ್ಚ ಹೆಚ್ಚಲಿಕ್ಕಿಲ್ಲವಷ್ಟೇ?"

"ಇಲ್ಲ. ಸಿಕ್ಕಸಿಕ್ಕಂತೆ ಅಪವ್ಯಯಮಾಡದಿದ್ದರೆ ಊಟ ತಿಂಡಿಗೆ ವಿಶೇಷ

ವೆಚ್ಚ ಬರಲಾರದು. ಇಂತಹ ಊಟದ ಯೋಜನೆ ಮುಂದಿನ ತಿಂಗಳಿಂದ ನಾನೇ ಮಾಡಬೇಕೆಂದಿದ್ದೆ. ಮನೆಯ ವೆಚ್ಚಕ್ಕಾಗಿ ನಾನೊಂದು ನಿಯಮ ಮಾಡಿದ್ದೇನೆ. ಅದರಂತೆ ನಡೆದರೆ ಹೆಚ್ಚು ವೆಚ್ಚ ತಗಲದು. ಹಾಗೆಯೇ ಆಗಬಹುದಷ್ಟೆ ? "

" ಆಗದೆ ಏನು ? " ಎಂದು ಶೈಲೇಶ ಚಕಿತನಾಗಿ ಕೇಳಿದ.

ಏನು ಉತ್ತರಕೊಡಬೇಕೆಂದು ಉಷೆಗೆ ಒಮ್ಮೆಲೇ ತೋಚದ್ದರಿಂದ ಕೆಲ ಹೊತ್ತಿನ ಮೇಲೆ ಅವಳು " ರಾತ್ರಿಯೆಲ್ಲ ಯೋಚಿಸಿ ನಾನೊಂದು ನಿರ್ಧಾರ ಮಾಡಿದ್ದೇನೆ. ಹಾಗೆ ನಡೆಯಲು ನನಗೆ ಒಪ್ಪಿಗೆ ಕೊಡುವಿರಾ ? "

" ಉಷಾ, ನಾನೆಂದೂ ನಿನ್ನ ಇಚ್ಛೆಗೆ ವಿರುದ್ಧವಾಗಿ ನಡೆದವನಲ್ಲ. ನಿನ್ನ ತೀರ್ಮಾನಗಳು ನಿನಗನುಗುಣವಾಗಿ ಯೋಗ್ಯವೇ ಇರುತ್ತವೆ. ಅದರಲ್ಲಿ ಬಹಳ ತಿದ್ದುಪಡೆ ಮಾಡಬೇಕಾಗುವುದಿಲ್ಲ. ನಾನು ದುರ್ಬಲ ಸ್ವಭಾವದ ಮನುಷ್ಯ. ನೀನು ಹಾಗಲ್ಲ, ಧೃಡನಿಶ್ಚಯದವಳು. "

" ಅದರಲ್ಲಿ ಬದಲಾವಣೆ ಆಗಬೇಕೆಂದು ತೋರಲಾರದು. ನಾನು ಚನ್ನಾಗಿ ಯೋಚಿಸಿಯೇ ಆ ನಿರ್ಧಾರಕ್ಕೆ ಬಂದಿರುತ್ತೇನೆ. "

ಈ ಪೀಠಿಕೆಯೆಲ್ಲ ಸೋಮೇಂದ್ರನ ಸಲುವಾಗಿಯೇ ಇರಬಹುದೆಂದು ಶೈಲೇಶ ಭಾವಿಸಿದ್ದ. " ಇದೆಲ್ಲ ಪ್ರಸ್ತಾವನೆಯಾಯಿತು. ನೀನು ಯೋಚಿಸಿರುವುದಾದರೂ ಏನು ? ನಾನೆಂದೂ ನಿನಗೆ ಅಡ್ಡಿ ಮಾಡುವುದಿಲ್ಲ. ಹೇಳು ನೋಡುವಾ ? " ಎಂದ ಅವನು.

" ಹೇಗಾದರೂ ಅಣ್ಣನ ಮನೆಯಲ್ಲಿ ನನ್ನ ನಿರ್ವಾಹವಾಗುತ್ತಿತ್ತು. ಅಲ್ಲಿ ನನಗೆ ಯಾವ ತೊಂದರೆಯೂ ಇರಲಿಲ್ಲ. ನಾಳೆ ಅಲ್ಲಿಯೇ ಹೋಗಬೇಕೆಂದು ನನ್ನ ನಿಶ್ಚಯ. "

" ಅಣ್ಣನಲ್ಲಿಗೆ ಹೋದರೆ ಎಂದು ಬರುವೆ ? "

" ಕ್ಷಮಿಸಿ ನನ್ನನ್ನು. ನಾನಿನ್ನು ಬರಲಾರೆ. ಇಲ್ಲಿ ನಾನು ದಿನಗಳೆಯು ವಂತೆ ತೋರದ್ದರಿಂದ, ಹೀಗೆ ನಿರ್ಣೈಸಿದ್ದೇನೆ. "

ಉಷೆಯ ಮಾತು ಕೇಳಿ ಶೈಲೇಶ ಕಲ್ಲಿನ ಪ್ರತಿಮೆಯಂತೆ ಕುಳಿತುಬಿಟ್ಟ. " ಕಬ್ಬಿಣದ ಬಾಗಿಲು ಮುಚ್ಚಿತು. ಜಗತ್ತಿನ ಯಾವ ಶಕ್ತಿಯೂ ಇನ್ನು ಅದನ್ನು ಭೇದಿಸಲಾರದು " ಎಂದು ಅವನ ಒಳದನಿ ನುಡಿಯಿತು.

ಬೆಳಿಗ್ಗೆ ಎದ್ದಾಗ, ರಾತ್ರಿಯೆಲ್ಲ ಭಯಂಕರ ಸ್ವಪ್ನ ಕಂಡಂತೆ ಶೈಲೇಶನಿಗೆ ನಿಸಿತು. ಅವನು ಕಿಡಿಕಿಯಿಂದ ಇಣಿಕಿದ. ಉಷೆ ಎಂದಿನಂತೆ ಗೃಹಕೃತ್ಯ ದಲ್ಲಿ ತೊಡಗಿದ್ದಳು. ಆವಳ ಹಿಂದೆ ಸೋಮೇಂದ್ರನೂ ಇದ್ದ. ಏನೋ ತಿನ್ನಲು ಬೇಕೆಂದು ಅವನು ಹಟಮಾಡುತ್ತಿದ್ದ. ಅವಳು ಕೆಳಗಿಳಿದು ಬರುವಾಗ ಶೈಲೇಶನು ಕಣ್ಣಿಗೆ ಬಿದ್ದುದರಿಂದ "ಅಡಿಗೆಯವನು ಚಹಾ ತಯಾರಿಸಿದ್ದಾನೆ. ಆರಬಹುದು, ಬೇಗ ಬನ್ನಿ" ಎಂದಳು.

"ಆಗಲಿ, ಈಗಲೇ ಬರುತ್ತೇನೆ" ಎಂದು ಉತ್ಸಾಹದಿಂದ ಬಚ್ಚಲು ಮನೆಗೆ ಹೋದ. "ನಾನೆಂತಹ ಹುಚ್ಚ? ಗಂಡಹೆಂಡಿರಲ್ಲಿ ಮತಭೇದ ವಾದಾಗ ಹೇಳಿದ ಮಾತನ್ನೇ ಭೀಷ್ಮ ಪ್ರತಿಜ್ಞೆಯೆಂದು ತಿಳಿದು ಇಡೀ ರಾತ್ರಿ ಯನ್ನೆಲ್ಲ ಯೋಚನೆಯಲ್ಲಿ ಕಳೆದೆ" ಎಂದು ತನ್ನಲ್ಲಿಯೇ ನಾಚಿಕೆಪಟ್ಟುಕೊಂಡ. "ಗಂಡನ ಒಂದು ಮಾತಿಗೇ ಹೆಂಡತಿ ಮನೆಬಿಟ್ಟು ತವರುಮನೆ ಸೇರುವು ದಾದರೆ ಪ್ರಪಂಚ ಹೇಗೆ ನಡೆದೀತು? ಒಂದು ವೇಳೆ ಸೋಮೇಂದ್ರನ ತಾಯಿ ಹೀಗೆ ಮಾಡಿದರೂ ಮಾಡಬಹುದಿತ್ತು. ಆದರೆ ಉಷೆಯಂತಹ ಹಿಂದೂ ಸಂಸ್ಕೃತಿಯಲ್ಲಿ ಬೆಳೆದ ಕನ್ಯೆ ಗಂಡನನ್ನು ಬಿಟ್ಟುಹೋಗುವುದು ಅಸಂಭಾವ್ಯವೇ ಸರಿ. ಸಿಟ್ಟಿನ ಭರದಲ್ಲಿ ಹೊರಬಿದ್ದ ಮಾತನ್ನೇ ಸತ್ಯವಾಗಿಸಲು ಆವಳು ತನ್ನ ಸಂಸ್ಕಾರಗಳಿಗೆಲ್ಲ ತಿಲಾಂಜಲಿಕೊಡಲಾರಳು. ಇಂತಹ ಕ್ಷುಲ್ಲಕ ಸಂಗತಿಗಳಿಗೆ ನಾನಿಷ್ಟು ಹೆದರಬೇಕೇ" ಎಂದು ಯೋಚಿಸಿ ಧೈರ್ಯ ತಂದುಕೊಂಡ. ಮನಸ್ಸು ಶಾಂತಿಪ್ರೇಮಗಳಿಂದ ಓತಪ್ರೋತವಾಯಿತು.

ವಿಭೆಯಂತಹ ಆಧುನಿಕ ವಿದ್ಯಾವಿಭೂಷಿತಳೊಡನೆ ಉಷೆಯ ತುಲನೆ ಮಾಡುವುದು ಅವನಿಗೆ ಸಮಂಜಸವೆನಿಸುತ್ತಿರಲಿಲ್ಲ. ಆದರೆ ಆದೇಕೋ ಇಂದು ಆ ಪ್ರೇರಣೆಯಾಯಿತು. ಅವನು ನಿಟ್ಟುಸಿರಿಟ್ಟು "ಇರಲಪ್ಪಾ, ನನಗೆಂದಾದರೂ ಹೆಣ್ಣು ಹುಟ್ಟಿದರೆ ತಾಯಿಯಂತೇ ಆದರೆ ಸಾಕು" ಎಂದು ಯೋಚಿಸುತ್ತ ಆವಸರದಿಂದ ತನ್ನ ಓದುವ ಕೋಣೆಗೆ ಹೋದ.

ಹೊಸದಾಗಿ ಬಂದ ಅಡಿಗೆಯವನು ಚಹಾ, ರೊಟ್ಟಿ, ಮಾಂಸ, ಕೇಕು ಇತ್ಯಾದಿ ಫಲಾಹಾರದ ಸಾಮುಗ್ರಿ ತಂದಿಟ್ಟಿದ್ದ. ಇದನ್ನೆಲ್ಲ ಕಂಡು ಶೈಲೇಶನಿಗೆ ಏನೋ ಎನ್ನಿಸಿತು. ಮೊದಲಿನಿಂದಲೂ ಇದೇ ತಿಂಡಿಯನ್ನು ತಿಂದ ಆಭ್ಯಾಸ.

ಆದು ಈ ನಡುವೆ ಉಷೆಯು ಬಂದಂದಿನಿಂದ ಮಾತ್ರ ತಪ್ಪಿದ್ದಿತು. ಆಕೆ ತಾನೇ ತಯಾರಿಸಿದ ಉಪ್ಪಿಟ್ಟನ್ನು ತಾನೇ ಬಡಿಸಿ, ತಿನ್ನುವ ವರೆಗೂ ಅಲ್ಲಿಯೆ ಕೂರುತ್ತಿದ್ದಳು. ಆದರೆ ಈ ಹೊತ್ತು ಅವಳು ಇನ್ನೂ ಬರಲಿಲ್ಲ. ಅದರಿಂದ ಅವನಿಗೆ ತಿನ್ನಲು ಮನಸ್ಸಾಗಲಿಲ್ಲ. ಹಾಗೆಯೇ ನೋಡುತ್ತ ಸುಮ್ಮನೆ ಕುಳಿತ. ಆ ವೇಳೆ ಒಂದು ಲೋಟ ಚಹಾ ಕುಡಿದು ಅಡಿಗೆಯವನಿಗೆ ಸಾಮಗ್ರಿಗಳನ್ನೆಲ್ಲ ತಿರುಗಿ ತೆಗೆದುಕೊಂಡುಹೋಗಲು ಹೇಳಿದ.

ಶೈಲೇಶ ಪರಿಚಿತ ಪದಧ್ವನಿ ಕೇಳಿಸಬಹುದೆಂದು ಕಿವಿ ಆಲಿಸಿಕೊಂಡು ಕುಳಿತ. ತಿಂಡಿಯನ್ನೇಕೆ ತಿನ್ನಲಿಲ್ಲವೆಂದು ಅವಳು ಕೇಳಿದರೆ ತುಸು ಗಡು-ಸಾಗಿಯೇ ಉತ್ತರಿಸಬೇಕೆಂದು ಯೋಚಿಸಿದ್ದ. ಆದರೆ ಪದಧ್ವನಿಯೇನೋ ಕೇಳಿಸಿತು. ತನಗೆ ಬೇಕಾದ ಮೋರೆ ಮಾತ್ರ ಬರಲಿಲ್ಲ. ಆಳು ಬಂದು ಪಾತ್ರೆ ತೆಗೆದುಕೊಂಡು ಹೋದ. ಆದರೂ ಉಷೆಯು ಅಲ್ಲಿ ಸುಳಿಯಲಿಲ್ಲ.

ಸಾವಕಾಶವಾಗಿ ಹೊತ್ತೇರಿತು. ಸ್ನಾನ ಊಟ ಮುಗಿಸಿ ಶೈಲೇಶನಿಗೆ ಕಾಲೇಜಿಗೆ ಹೋಗುವುದಿತ್ತು. ಅವನು ಊಟ ಮಾಡುವಾಗ ಉಷೆ ಹತ್ತಿರ ಬಂದು ಕುಳಿತರೂ ಅವಳ ಇಂದಿನ ವರ್ತನೆಯಲ್ಲಿ ಏನೋ ಕೊರತೆ ಇದ್ದಂತೆ ತೋರಿತು. ಒಂದೇ ರಾತ್ರಿಯಲ್ಲಿ ಎಂತಹ ಹೆಚ್ಚು ಕಡಿಮೆ ಆಯಿತೆಂದು ತಿಳಿದು ಅವನು ಚಕಿತನಾದ. ಉಡುಪು ಹಾಕಿಕೊಳ್ಳಲು ಕೋಣೆಗೆ ಹೋದಾಗ ಅಲ್ಲಿಟ್ಟ ಆಯ ವೆಚ್ಚದ ಪಟ್ಟಿಯ ಮೇಲೆ ಅವನ ಕಣ್ಣು ಬಿದ್ದಿತು. ಈ ಪಟ್ಟಿ ಹಿಂದಿನ ದಿನದಿಂದಲೂ ಇಲ್ಲಿಯೇ ಬಿದ್ದಿರಬೇಕೆಂದು ತೋರಿತು. ಅಥವಾ ಉಷೆಯೇ ನನ್ನ ಕಣ್ಣಿಗೆ ಬೀಳಲೆಂದು ಇಂದು ಇಟ್ಟಿದ್ದರೂ ಇಟ್ಟಿರಬಹುದೆಂದು ಭಾವಿಸಿದ. ಇದೇನು ತಿಂಗಳಿನ ಕೊನೆಯ ದಿನವಲ್ಲ. ಎಂದಬಳಿಕ ಅದನ್ನು ಇಲ್ಲಿ ಇಟ್ಟಿರುವ ಅವಶ್ಯಕತೆ ಏನು? ಈ ಯೋಚನೆಯಿಂದ, ಕಟ್ಟಿಕೊಳ್ಳಬೇಕೆಂದಿದ್ದ ಕೊರಳ ಪಟ್ಟಿ ಕೈಯ್ಯಲ್ಲೇ ಉಳಿಯಿತು. ಅರ್ಧ ಕುತೂಹಲ, ಅರ್ಧ ಅನ್ಯಮನಸ್ಕತೆಯಿಂದ ಅವನು ಒಂದೊಂದೇ ಹಾಳೆ ಮಗುಚಿದ. ಕೊನೆಯ ಪುಟಕ್ಕೆ ಹೋಗಿ ನಿಂತ. ಪ್ರತಿಯೊಂದು ಹಾಳೆಯ ಮೇಲೂ ಸುಮಾರಾಗಿ ಒಂದೇ ಮಾದರಿಯ ಲೆಕ್ಕ—ಅದೇ ಮೀನು, ಅದೇ ಕಾಯಿಪಲ್ಲೆ, ಬಟಾಟೆ, ಅಕ್ಕಿ, ಕೇಕು, ಹಾಲು, ಆಳುಗಳ ಸಂಬಳ ಮುಂತಾದ್ದು. ಲೆಕ್ಕವೆಲ್ಲ ಕನ್ನಡಿಯ ಹಾಗಿತ್ತು. ಕೈಯಲ್ಲಿದ್ದ ಉಳಿಕೆ ತಿಳಿಯುವಂತಿತ್ತು.

ಉಷೆ ಲೆಕ್ಕ ಬರೆಯಲು ಆರಂಭಿಸಿದ ದಿನ ಶೈಲೇಶ ಪ್ರಯಾಗಿನಲ್ಲಿದ್ದ.

ಲೆಕ್ಕ ಬರೆಯಲು ಪ್ರೇರಿಸಿದವನೂ ಅವನಲ್ಲ; ಬಂದ ಮೇಲೆ ಆ ಕೆಲಸಕ್ಕೆ ಅವನು ನೆರವಾದುದೂ ಅಷ್ಟಕ್ಕಷ್ಟೆ. ಮುಂದೆ ಬರೆಯದಿದ್ದರೂ ಅವನಿಗಾಗುತ್ತಿದ್ದ ದುಃಖ ಅಷ್ಟರಲ್ಲೇ ಇದೆ. ಮನೆಯ ಲೆಕ್ಕ ಬರೆದಿಡುವ ರೂಢಿ ಅವರಲ್ಲಿ ಹಿಂದಿನಿಂದಲೂ ಇದ್ದಿಲ್ಲ. ಬರೆಯದಿದ್ದರೆ ಹಾನಿಯಾದೀತೆಂಬ ಶಂಕೆಯೂ ಇರಲಿಲ್ಲ. ಆದರೆ ಇಂದು ಆ ಲೆಕ್ಕವನ್ನೆಲ್ಲ ನೋಡಿ ಅವನ ಮನಸಿನಲ್ಲಿ ಎಂತೆಂತಹದೋ ಕಲ್ಪನೆಗಳು ಸುಳಿದುಹೋದವು. ಪಟ್ಟಿಯನ್ನು ಮುಚ್ಚಿ ತಿರುಗಿ ಕೊರಳಪಟ್ಟಿ ಕಟ್ಟಲು ಮೊದಲಿಸಿದ. "ಈ ಪ್ರಪಂಚದಲ್ಲಿ ಯಾವ ಚಿಪ್ಪಿನಲ್ಲಿ ಯಾವ ಮುತ್ತಿದೆಯೋ ಯಾರು ಬಲ್ಲರು ?" ಎಂದು ಯೋಚಿಸಿದ.

ಕಾಲೇಜಿಗೆ ಹೊರಟಾಗ ಉಷೆಯನ್ನು ಕರೆದು ಸಂಶಯ ನಿವೃತ್ತಿಮಾಡಿಕೊಳ್ಳಬೇಕೆಂದು ಬಯಸಿದನಾದರೂ ಕರೆಯಲು ಧೈರ್ಯವಾಗಲಿಲ್ಲ. ಮುಂದೇನಾದೀತೋ ಎಂಬ ಶಂಕೆಯಲ್ಲಿ ಅವನ ಮನಸ್ಸು ಕಳವಳಗೊಳ್ಳುತ್ತಿತ್ತು. ಈ ಅನಿಶ್ಚಿತ ಶಂಕೆಯು ನಿಶ್ಚಿತವಾಗಿಯೂ ದುರ್ಘಟನೆಯಲ್ಲಿ ಪರಿಣಮಿಸಬಹುದೆಂದು ತಿಳಿಯಲು ಮನಸ್ಸು ಒಡಂಬಡಲಿಲ್ಲ.

## ೧೧

ಕಾಲೇಜು ಬಿಟ್ಟನಂತರ ಶೈಲೇಶ ನೇರವಾಗಿ ಮನೆಗೆ ಬರುವ ಬದಲು ವಿಭೆಯ ಮನೆಗೆ ಹೋದ. ಅಲ್ಲಿಗೆ ಹೋದ ಮೇಲೆ, ತನ್ನ ಊಹೆ ತೀರ ಸುಳ್ಳಾಗಲಿಲ್ಲವೆಂದು ಕಂಡುಬಂತು. ಭಾವ ಕಚೇರಿಗೆ ಹೋಗಿರಲಿಲ್ಲ. ಅಲ್ಲದೆ ಗಂಡಹೆಂಡಿರಲ್ಲಿ ಬೇಸರಭಾವವಿರಲಿಲ್ಲ. ಇದನ್ನು ಕಂಡು ಅವನಿಗೆ ಸಂತೋಷವಾಯಿತು. "ವಿಭಾ, ಸೋಮೇಂದ್ರನನ್ನು ಕರೆಯಲು ಜನ ಕಳಿಸಲಿಲ್ಲವಲ್ಲ ?" ಎಂದು ಕೇಳಿದ ಅವನು.

ವಿಭಾ ಏನೋ ಹೇಳುವುದರಲ್ಲಿದ್ದಳು. ಅದರೆ ಅಷ್ಟರಲ್ಲಿ ಕ್ಷೇತ್ರಮೋಹನನೇ "ಆನೆ ಕೊಳ್ಳುವವರು ಈಗ ಇಲ್ಲ" ಎಂದು ನುಡಿದ.

"ಹಾಗೆಂದರೇನು ?"

"ಯಾರೋ ಒಬ್ಬ ಹೆಂಡಕುಡುಕನಿದ್ದ. ಅಮಲೇರಿದಾಗ 'ರಾಜನ ಆನೆಯನ್ನೇ ಕೊಂಡುಕೊಳ್ಳುತ್ತೇನೆ' ಎಂದುಬಿಟ್ಟ. ಮಾರನೇ ದಿನ ಅರಸನ ಸೇವಕರು ಅವನನ್ನು ರಾಜನ ಮುಂದೆ ನಿಲ್ಲಿಸಿ 'ಇಂತಹ ಹುಚ್ಚುತನ ಏಕೆ

ಮಾಡಿದೆ?' ಎಂದು ಕೇಳಿದರು. ಆಗ ಅವನು ಕೈಜೋಡಿಸಿ 'ಇಲ್ಲ ಸ್ವಾಮಿ, ನನಗೆ ಆನೆಯ ಅವಶ್ಯಕತೆ ಇಲ್ಲ' ಎಂದನಂತೆ. ಅದರಂತೆಯೇ, ಈಗ ಆನೆ ಕೊಳ್ಳುವವರು ಇಲ್ಲಿ ಇಲ್ಲ" ಎಂದು ನಗತೊಡಗಿದ. ನಗೆಯು ನಿಂತ ಮೇಲೆ "ಶೈಲೇಶ, ಈ ಕತೆಯನ್ನು ಅತ್ತಿಗೆಗೆ ಹೇಳಿ ಅವಳು ಬೇಸರಪಟ್ಟುಕೊಳ್ಳಕೂಡ ದೆಂದು ತಿಳಿಸು. ತಾಯಿಯನ್ನು ಬಿಟ್ಟು ಅತ್ತೆಯ ಹತ್ತಿರ ಮಗನು ಸುಧಾರಿಸು ವುದಾದರೆ ಹೇಗಾದರೂ ಸಾಲ ಮಾಡಿ ವಿಭೆಗೆ ಆನೆಯನ್ನೇ ಕೊಂಡುಕೊಡುವೆ" ಎಂದು ಹೇಳಿ ವಿಭೆಯ ದೃಷ್ಟಿಗೆ ಬೀಳದಂತೆ ಮುಖ ಮರೆಸಿ ನಗತೊಡಗಿದ. ಆದರೆ ಶೈಲೇಶ ನಗಲಿಲ್ಲ. ತಾನೂ ನಕ್ಕರೆ ಹಿಂದಿನ ಸಿಟ್ಟು ಇನ್ನೊಮ್ಮೆ ನೆಗೆದೇಳಬಹುದೆಂಬ ಭೀತಿ ಆತನಿಗೆ. ಆದರೆ ನಗೆ ಬಿಗಿಹಿಡಿಯಲು ಅವನಿಗೆ ಅತ್ಯಂತ ಪ್ರಯಾಸವಾಯಿತು.

ಆ ಮೇಲೆ ಕ್ಷೇತ್ರಮೋಹನ ಶೈಲೇಶನಿಗೆ ಬಂದ ಕಾರಣವನ್ನು ಕೇಳಿ "ಅದುದಾದರೂ ಏನು?" ಎಂದ.

"ಸೋಮೇಂದ್ರನ ಹೊಣೆಯನ್ನು ವಿಭೆ ಹೊತ್ತದ್ದರಿಂದ ನಾನು ನಿಶ್ಚಿಂತ ನಾಗಿದ್ದೆ. ಆದರೆ ಈಗ ಬೇರೆ ಏನಾದರೂ ಉಪಾಯವನ್ನು ಯೋಜಿಸಲೇ ಬೇಕಾಯಿತು."

"ಎಂದರೆ—? ಉಷೆಯ ಜೊತೆಗೆ ಮಗನಿದ್ದರೆ ಕೆಟ್ಟೇ ಹೋಗುವನೆಂದು ತಿಳಿದಿರುವೆಯಲ್ಲವೇ?"

"ಹಾಗೇನಲ್ಲ. ಆದರೆ ಉಷೆ ತಾನಾಗಿಯೇ ಹೋಗಲಿದ್ದಾಳೆ."

"ಹೋಗುವಳೇ? ಎಲ್ಲಿಗೆ?"

"ಬಂದಲ್ಲಿಗೆ—ಅಣ್ಣನ ಮನೆಗೆ."

ಕ್ಷೇತ್ರಮೋಹನ ಗಂಭೀರನಾಗಿ, ಹೆಂಡತಿಯನ್ನು ಕ್ರೂರವಾಗಿ ನೋಡಿ "ನನಗೂ ಇದೇ ಶಂಕೆಯಿತ್ತು" ಎಂದ.

ಇಷ್ಟು ಹೊತ್ತು ಮೌನವಾಗಿದ್ದ ವಿಭೆ ಈಗ ಬಾಯಿ ಬಿಚ್ಚಿದಳು. ತನ್ನ ಗಂಡನ ಗುಣ—ವಾಣಿ ಅವಳಿಗೆ ಗೊತ್ತಿಲ್ಲದೆ ಇದೆಯೇ? ಅದರಿಂದ ಅವಳು ಸಹಜಸ್ವರದಿಂದಲೇ ನುಡಿದಳು:—"ಏನಣ್ಣಾ, ನನ್ನನ್ನು ನೆವಕ್ಕೆ ಮುಂದೂಡಿ ಈ ಯೋಚನೆ ನಡೆಸಿರುವೆಯಾ? ನಿನಗೆ ಹಾಗೇ ಇಚ್ಛೆ ಇದ್ದುದಾದರೆ ನಾನೇನೂ ತಡೆಯಲಾರೆ. ಆದರೆ ನಿಮ್ಮಿಬ್ಬರಿಗೂ ಒಂದಲ್ಲ ಒಂದು ದಿನ ಅಳುವ ಸಂದರ್ಭ ಬಂದೀತು."

ಶೈಲೇಶ ಬೆಳಿಗಿನಿಂದ ನಡೆದ ಎಲ್ಲ ಘಟನೆಗಳನ್ನು—ಮುಸಲ್ಮಾನ ಅಡಿಗೆಯವನು ಬಂದುದು, ಲೆಕ್ಕದ ಪಟ್ಟಿಯ ವಿಷಯ, ಮುಂತಾದ ಎಲ್ಲವನ್ನೂ—ಹೇಳಿದ. ಆ ಮೇಲೆ "ಅವಳಿಗೆ ಹೋಗಲು ನಾನಾಗಿ ಹೇಳಲಿಲ್ಲ. ಅವಳು ಹೋಗಲೇಬೇಕೆಂದು ಹಟ ಹಿಡಿದರೆ ನಿಲ್ಲಲು ನಾನು ಒತ್ತಾಯಮಾಡುವಂತಿಲ್ಲ. ಇದರಿಂದ ಪರಿಚಿತರಲ್ಲಿ, ಗೆಳೆಯರಲ್ಲಿ, ನನ್ನ ಅವಮಾನವಾದೀತೆಂಬುದನ್ನೂ ನಾನು ಬಲ್ಲೆ. ಇಲ್ಲಿಗೆ ನನ್ನ ಮೇಲಿನ ಹೊರೆಯೊಂದು ಇಳಿದ ಹಾಗೆ ಆಗುವುದು. ಈ ಎಲ್ಲ ಸಂಗತಿ ನಿಮಗೊಬ್ಬರಿಗಾದರೂ ತಿಳಿದಿರಲೆಂದು ಇಂದು ಇಲ್ಲಿಗೆ ಬಂದೆ. ನನ್ನಲ್ಲಿ ದೋಷವಿಲ್ಲನೆಂದು ನೀವಾದರೂ ತಿಳಿದುಕೊಂಡರೆ ಸಾಕು."

"ಭವಾನೀಪುರದಲ್ಲಿ ನಡೆದ ಘಟನೆಯ ವ್ಯವಸ್ಥೆಯೇನಾಯಿತು?"

ಕ್ಷೇತ್ರಮೋಹನನ ಈ ಮಾತು ಕೇಳಿ ಶೈಲೇಶನಿಗೆ ಸಿಟ್ಟು ಬಂದಿತು—"ನಿನ್ನ ನಾಲಗೆಯಿಂದಲೂ ಇಂತಹ ಮಾತು ಬರಬಹುದೇ? ಮಾಯಲಾರದ ಗಾಯದ ಮೇಲೆ ಉಪ್ಪುನೀರು ಎರಚುತ್ತಿರುವೆಯೆಂಬ ಯೋಚನೆ ನಿನಗಾಗದೇ?"

"ಅದೇನೋ ಸರಿ. ಆದರೆ ಆ ಮಾಯಲಾರದ ಗಾಯ ಯಾವುದೆಂದು ಸರಿಯಾಗಿ ಊಹಿಸಲಾರೆನಲ್ಲ!"

"ಹೆಂಡತಿಯೊಡನೆಯೇ ಆ ರೀತಿ ವ್ಯವಹರಿಸಿದ ನಿನ್ನಿಂದ ಇದಕ್ಕೂ ಹೆಚ್ಚಿನ ಆಸೆಮಾಡುವುದು ಹುಚ್ಚೇ ಸರಿ. ನಿನಗೆ ಅಪಮಾನವಾದೀತೆಂದು ಸುಮ್ಮನಿದ್ದೆ. ಇಲ್ಲವಾದರೆ ಎಂದೋ ಆಡಿಬಿಡುತ್ತಿದ್ದೆ."

"ನಿನ್ನ ಮಾತು ನಿಜ. ಆ ವಿಷಯವನ್ನು ನಾನಿನ್ನೂ ಸರಿಯಾಗಿ ತಿಳಿದುಕೊಂಡಿಲ್ಲ. ಇತ್ತ ಜ್ಞಾನಾರ್ಜನೆ ಮಾಡುವ ವಯಸ್ಸೂ ಮೀರಿಹೋಗಿದೆ. ಇದನ್ನು ಕುರಿತು ನೀನು ಒಂದು ಪುಸ್ತಕ ಬರೆದರೆ ನಮ್ಮಂತಹ ಪಾಮರರಿಗೆ ಅದೆಷ್ಟೋ ಹಿತವಾದೀತು. ಅಲ್ಲಿಯ ತನಕ ನೀವೇ ಅಣ್ಣತಂಗಿಯರು ಯೋಚನೆ ನಡೆಸಿರಿ. ನಾನು ಇದೀಗ ಬರುತ್ತೇನೆ."

"ಪುಸ್ತಕ ಈಗಲೇ ಬರೆಯಲು ಆಗುವುದೆ? ಆದ್ದರಿಂದ ಕೇಳಿಯೇ ಹೋಗು. ಭವಾನಿಪುರದಲ್ಲಿ ನಡೆದ ಘಟನೆಯ ಬಗೆಗೆ ಅವರು ಯೋಚನೆ ಮಾಡದಿದ್ದರೂ ನಾನು ಯೋಚಿಸಲೇ ಬೇಕು."

"ಸುಮ್ಮನೇ ನೀನು ಇಷ್ಟೊಂದು ದಿನ ಕಳೆದೆ. ಈಗಲಾದರೂ ವಿಳಂಬ ಮಾಡಬೇಡ" ಎಂದು ಹೊರಟು ಹೋದ ಕ್ಷೇತ್ರಮೋಹನ.

ಮಾರನೇ ದಿನ ಬೆಳಿಗ್ಗೆ ಕ್ಷೇತ್ರಮೋಹನನು ಪಟಲ್‌ಡಾಂಗಾಕ್ಕೆ ಬಂದ. ಆಗ ಶೈಲೇಶ ಸ್ನಾನಕ್ಕೆ ಅಣಿಯಾಗಿದ್ದ. ಭಾವನನ್ನು ಆಕಸ್ಮಿಕವಾಗಿ ಕಂಡು ಚಕಿತನಾದ. ನಿನ್ನೆ ಅಷ್ಟೊಂದು ವಾದವಿವಾದ ಮಾಡಿದ ಮನುಷ್ಯ, ಕರೆಯದೆ ಇಂದೇ ಬಂದು ಮೋರೆ ತೋರಿಸುವನೆಂದು ಅವನು ಊಹಿಸಿರಲಿಲ್ಲ. ಹೀಗಾಗಿ ಆವನಿಗೆ ಮನಸ್ಸಿನಲ್ಲಿಯೇ ನಾಚಿಕೆ ಆಯಿತು.

"ಇದೇನು, ಇಂದು ಹೈಕೋರ್ಟು ಬಂದಾಗಿದೆಯೇ ?"

"ನಾನು ಹೋಗದಿದ್ದರೆ ಆದೇಕೆ ಬಂದಾಗಬೇಕು ?"

"ಹಾಗಾದರೆ ಪ್ರ್ಯಾಕ್ಟೀಸು ಬಿಟ್ಟೆಯಾ ?"

"ಇದು ನಿನ್ನಂತಹನು ಕೇಳುವ ಪ್ರಶ್ನೆಯಲ್ಲ."

"ಹಾಗಾದರೆ ನಾನೇ ಅಯೋಗ್ಯನಾಗಿರಬಹುದು. ಇರಲಿ, ನಾನೀಗ ಸ್ನಾನಮಾಡಿ ಬರುತ್ತೇನೆ."

"ಆಗಲಿ, ಹೋಗಿ ಬಾ."

ಆ ಮೇಲೆ ಕ್ಷೇತ್ರಮೋಹನ ಒಳಹೊಕ್ಕು "ಅಕ್ಕಾ, ನಾನು ಬರ ಬಹುದೇ ?" ಎಂದು ಕೇಳಿದ.

ಆ ಮನೆಯಲ್ಲಿ ಪೂಜೆಗಾಗಿ ಇನ್ನಾವ ಸ್ವತಂತ್ರ ಕೋಣೆಯೂ ಇರಲಿಲ್ಲ. ಮಲಗುವ ಕೋಣೆಯಲ್ಲಿಯೇ ಒಂದು ಬದಿಯಲ್ಲಿ ಪೂಜೆಯ ಸಿದ್ಧತೆ ನಡಿಸಿದ್ದಳು ಉಷಾ. ಪರಿಚಿತ ಕಂಠಸ್ವರವಾದುದರಿಂದ ಅವಳು ತಲೆಯ ಸೆರಗನ್ನೆಳೆದು 'ಬನ್ನಿ' ಎಂದು ಸ್ವಾಗತಿಸಿದಳು.

ಅಲ್ಲಿಯ ಸಿದ್ಧತೆ ಕಂಡು ಕ್ಷೇತ್ರಮೋಹನನಿಗೆ ಸಂಕೋಚವೆನಿಸಿತು. "ಅಕ್ಕ, ನಾನೀಗ ಬರಬಾರದಿತ್ತು. ಇರಲಿ. ನಿಮಗೆ ಒಮ್ಮಿಂದೊಮ್ಮೆಲೇ ತವರುಮನೆಗೆ ಹೋಗುವ ಬಯಕೆ ಏಕೆ ಬಂತು ? ತಂದೆಯವರ ಆರೋಗ್ಯ ಸರಿಯಾಗಿಲ್ಲವೇ ?"

"ತಂದೆ ಇಲ್ಲದೆ ಎಷ್ಟೋ ಕಾಲವಾಯಿತು."

"ಮತ್ತೆ ತಾಯಿಗೇನು ಬೇನೆ ಬೇಸರಿಕೆಯೆ ?"

"ಅವಳು ತಂದೆಗಿಂತ ಮೊದಲೇ ಸ್ವರ್ಗ ಸೇರಿದ್ದಾಳೆ."

"ಹಾಗಾದರೆ ಎಲ್ಲಿಗೆ ಹೋಗುವಿರಿ ? ಅಲ್ಲಿ ಇದ್ದವರಾದರೂ ಯಾರು ? ಇಂತಹ ಸ್ಥಿತಿಯಲ್ಲಿ ನಿಮ್ಮನ್ನೆಂದಿಗೂ ಹೋಗಗೊಡುವುದಿಲ್ಲ. ಶೈಲೇಶನ ಮಾತು ಬಿಟ್ಟುಬಿಡಿ. ನಾವು ಯಾರೂ ಇದನ್ನು ಒಪ್ಪುವಂತಿಲ್ಲ."

"ಒಪ್ಪುವುದಿಲ್ಲವೇ ?"

"ಇಲ್ಲ. ಎಂದಿಗೂ ಒಪ್ಪಲಾರೆವು."

"ಆದರೆ ಕ್ಷೇತ್ರಬಾಬುಗಳೇ, ನಾನು ಇಷ್ಟೆಲ್ಲ ದಿನ ದೂಡಿದುದೂ ಅಣ್ಣನಲ್ಲಿಯೇ. ಒಂದು ದಿನವೂ ಆತನಿಗೆ ಭಾರವೆನಿಸಲಿಲ್ಲ."

"ನೀವು ನಿರ್ಧಾರ ಮಾಡಿದುದೇ ಆದರೆ ಎಂದು ಬರುವಿರೆಂದು ತಿಳಿಸಿ ಹೋಗಿ. ಇಲ್ಲವಾದರೆ ಸೋಮೇಂದ್ರನನ್ನು ನೋಡಿಕೊಳ್ಳುವವರು ಯಾರು ?"

"ಸೋಮೇಂದ್ರನ ಅತ್ತೆ ಇದ್ದಾಳೆ."

"ಅವಳು ನನ್ನ ಹೆಂಡತಿಯಾದುದರಿಂದ ನಾನು ಕ್ಷಮೆ ಕೇಳಿಕೊಂಡರಾದರೂ ನೀವು ಹೋಗುವುದನ್ನು ನಿಲ್ಲಿಸುವಿರಾ ?"

ಉಷೆ ಏನೂ ಉತ್ತರಕೊಡಲಿಲ್ಲ, ಮೋರೆ ಕೆಳಗೆ ಹಾಕಿದಳು. ಕೆಲಹೊತ್ತು ನಿರೀಕ್ಷೆ ಮಾಡಿದರೂ ಉತ್ತರ ಬಾರದಿರಲು ಕ್ಷೇತ್ರಮೋಹನನು ನಿಟ್ಟುಸಿರಿಟ್ಟು "ಪಾಪಕ್ಕೆ ದುಷ್ಪರಿಣಾಮವಿದ್ದೇ ಇದೆ. ತಪ್ಪುಮಾಡಿದವನಿಗೆ ಶಿಕ್ಷೆಯಾಗಬೇಕೆಂಬುದು ನಿಜವಾದರೂ ಅಪರಾಧಿಯ ಪುನರ್ವಿಚಾರವಾಗಬಹುದಲ್ಲವೆ ?" ಎಂದು ಸಾವಕಾಶವಾಗಿ ಕೇಳಿದ.

"ಯಾರೋ ಮಾಡಿದ ಪಾಪಕ್ಕಾಗಿ ಇನ್ನಾರೋ ಫಲಭೋಗಿಸಬೇಕೆ ?"

"ನೀವು ಎಂದು ಹೋಗುವಿರಿ ?"

"ಅಣ್ಣ ಕರೆಯಲು ಬಂದೊಡನೆಯೆ. ಬಹುಶಃ ನಾಳೆ ಅಣ್ಣ ಬರಬಹುದು."

"ನಿಮ್ಮೊಡನೆ ಒಂದು ಸಂಗತಿಯನ್ನು ಎಂದೂ ಹೇಳಬಾರದೆಂದಿದ್ದೆ. ಹೇಳದಿದ್ದರೆ ಪಾಪಮಾಡಿದಂತಾಗುತ್ತದೋ ಏನೋ ಎಂಬ ಶಂಕೆ ಬರುತ್ತಿದೆ. ನೀವು ಈ ಮನೆಗೆ ಬರುವುದಕ್ಕಿಂತ ಮೊದಲು ಇನ್ನೊಂದು ವ್ಯಕ್ತಿ ಬರುವ ಸಂದರ್ಭವಿತ್ತು. ಆ ಒಳಸಂಚು ಇನ್ನೂ ಪೂರ್ತಿಯಾದಂತಿಲ್ಲ."

"ಅದನ್ನು ನಾನು ಬಲ್ಲೆ."

"ಹಾಗಾದರೆ ಯಾರದೋ ಒಬ್ಬರ ಮಾತಿಗೆ ರೇಗಿ, ಆ ಒಳಸಂಚು ಯಶಸ್ವಿಯಾಗಗೊಡುವಿರಾ?"

"ಆ ಸಂಚು ಹುಸಿಯಾಗಲಿ, ಗೆಲ್ಲಲಿ, ದಯವಿಟ್ಟು ನನ್ನನ್ನು ಮನ್ನಿಸಿ" ಎಂದವಳೇ ಕೈಜೋಡಿಸಿ ನಿಂತಳು. ಇಷ್ಟು ಹೊತ್ತಿನ ನಂತರ ಅವಳು ಕ್ಷೇತ್ರಮೋಹನನನ್ನು ಕಣ್ಣೆತ್ತಿ ನೋಡಿದ್ದು ಈಗಲೇ.

ಕ್ಷೇತ್ರಮೋಹನ ಚಕಿತನಾಗಿ ಹಾಗೆಯೇ ನೋಡುತ್ತ ನಿಂತ.

ಶೈಲೇಶ ಹೆಂಡತಿಯೊಡನೆ ಮಾತನಾಡುವುದನ್ನೇ ಬಿಟ್ಟುಬಿಟ್ಟ. ಆದರೆ ಅವಳ ನಡತೆಯಲ್ಲಿ ಮಾತ್ರ ಎಳ್ಳಷ್ಟೂ ಪರಿವರ್ತನೆಯಾಗಲಿಲ್ಲ. ಅವಳು ಮೊದಲಿನಂತೆಯೇ ಮನೆಗೆಲಸಗಳನ್ನು ನಿರ್ವಹಿಸುತ್ತಿದ್ದಳು. ಈ ಮನೆಯನ್ನು ಕೊನೆಯ ವರೆಗೂ ಬಿಟ್ಟುಹೋಗುವವಳು ಇಷ್ಟೇಕೆ ಆತ್ಮೀಯತೆಯಿಂದ ಕೆಲಸ ಮಾಡುತ್ತಾಳೆಂಬುದೇ ಆತನಿಗೆ ಬಗೆಹರಿಯದ ಒಗಟಾಗಿತ್ತು. ಒಮ್ಮೆ ಹೊಸ ನೌಕರನೊಬ್ಬನು ಗೋಡೆ ಕೊಳಕುಮಾಡಿದ್ದರಿಂದ ಅವಳು ಬಯ್ದೂ ಇದ್ದಳು. ಅವಳ ದೈನಂದಿನದ ಕೆಲಸದಲ್ಲಿ ಯಾವ ಕೊರತೆಯೂ ಕಂಡು ಬರಲಿಲ್ಲ. ಮನೆಯ ವ್ಯವಸ್ಥೆಯನ್ನೂ ಚೆನ್ನಾಗಿಟ್ಟಿದ್ದಳು.

ಉಷೆಯ ಗುಣಸ್ವಭಾವಗಳನ್ನು ಚನ್ನಾಗಿ ಅರಿತುಕೊಳ್ಳಲು ಶೈಲೇಶನಿಗೆ ಅವಕಾಶ ಲಭಿಸಿರಲಿಲ್ಲ. ಮಾನವ ಸ್ವಭಾವದ ಬಗೆಗೆ ಅವನು ತುಂಬಾ ಓದಿದ್ದ. ಮಾನವಸ್ವಭಾವದ ಬಗೆಗೆ ಅವನಿಗೆ ತಕ್ಕಷ್ಟು ಅನುಭವವೂ ಇದೆಯೆಂದರೆ ತಪ್ಪಾಗಲಾರದು. ಆದರೆ ಉಷೆಯ ಚಾರಿತ್ರ್ಯ ಮಾತ್ರ ಆತನ ಅನುಭವಕ್ಕೆ ನಿಲುಕಿರಲಿಲ್ಲ.

ಉಷೆಯಲ್ಲಿರುವಂತಹ ಅದ್ಭುತ ಶಕ್ತಿಯನ್ನು ಅವನು ಇನ್ನಾರಲ್ಲಿಯೂ ಕಂಡಿರಲಿಲ್ಲ. ಒಂದು ಕಣ್ಣಿನಿಂದ ಅತ್ತರೆ ಇನ್ನೊಂದರಿಂದ ನಗುವವಳು ಅವಳು.

ಕ್ಷೇತ್ರಮೋಹನನು ನೇರವಾಗಿ ಒಳಹೊಕ್ಕು 'ಅಕ್ಕ, ಪ್ರಸಾದದ ಕೃಪೆಯಾಗಲು ಇನ್ನೆಷ್ಟು ಹೊತ್ತಿದೆ?' ಎಂದು ಕೇಳಿದ.

"ನಿಮ್ಮ ಭಾವಂದಿರನ್ನು ಕೇಳಿ ಬನ್ನಿ. ತಡವಿದ್ದರೆ ಅವರಿಂದಲೇ ಹೊರತು ನನ್ನಿಂದಲ್ಲ."

"ನಿಮ್ಮನ್ನು ಮಾತಿನಲ್ಲಿ ಸೋಲಿಸುವ ಯೋಗ್ಯತೆ ನನ್ನದಲ್ಲವೆಂದು ಬಲ್ಲೆ. ಹೊಟ್ಟೆ ತುಂಬಿದರೂ ನಿಮ್ಮ ಅಡಿಗೆ ಇನ್ನಷ್ಟು ಉಣ್ಣುವಾ ಎನಿಸುತ್ತದೆ. ಆದರೆ ತಿಂದ ಮೇಲೆ ಆರೋಗ್ಯ ಕೆಟ್ಟರೆ ಹೇಗೆ ಎಂಬುದೇ ಹೆದರಿಕೆ. ಇತ್ತ ನಿಮ್ಮ ಆಮಂತ್ರಣವನ್ನು ನಿರಾಕರಿಸಲೂ ಆರೆ. ಊಟಕ್ಕೆ ಇನ್ನೊಂದಾದರೂ ಬರುತ್ತೇನೆ. ನಿಮ್ಮ ಮಗನೆಲ್ಲಿ?"

"ಶಾಲೆಗೆ ಹೋಗಿದ್ದಾನೆ. ಯಾಕೋ ಏನೋ, ಎಷ್ಟು ತಿಳಿಹೇಳಿದರೂ

ಅವನು ಇಂದು ಶಾಲೆಗೆ ಹೋಗಲಿಕ್ಕೇ ಸಿದ್ಧನಿರಲಿಲ್ಲ. ಬಹಳ ಹೇಳಿದ ಮೇಲೆ ಕೊನೆಗೆ ಇದೀಗ ಊಟ ಮುಗಿಸಿ ಹೋಗಿದ್ದಾನೆ."

"ಪಾಪ! ಅವನು ನಿಮ್ಮನ್ನು ಬಿಟ್ಟು ಇರಲಾರ. ಇರಲಿ. ಅಕ್ಕಾ, ತವರು ಮನೆಗೆ ಹೋಗುವ ವಿಚಾರವೇನಾಯಿತು? ಸಿಟ್ಟಿನ ಭರದಲ್ಲಿ ಹೊರಬಿದ್ದ ಮಾತನ್ನೇ ಸತ್ಯವಾಗಿಸಲು ಯತ್ನಿಸುವುದಾದರೆ ಪ್ರಪಂಚದಲ್ಲಿ ಯಾರನ್ನು ನಂಬಬೇಕೋ ತಿಳಿಯದಾಗಿದೆ."

ಉಷೆಯು ತಲೆತಗ್ಗಿಸಿ ಮೌನವಾಗಿದ್ದಳು. ಕ್ಷೇತ್ರಮೋಹನ ಶೈಲೇಶನ ಓದುವ ಕೋಣೆಗೆ ಹೋದ. ಅವನು ಆಗ ತಾನೆ ಮಿಂದು ಕೂದಲನ್ನು ಬಾಚಿ ಕೊಳ್ಳುತ್ತಲಿದ್ದ. ಕ್ಷೇತ್ರಮೋಹನ ಬಂದವನೇ "ಇದೇನು, ಇಂದು ಕಾಲೇಜಿ ಲ್ಲವೇ" ಎಂದು ಕೇಳಿದ.

"ಇದೆ. ಆದರೆ ಮೊದಲಿನ ಎರಡು ಗಂಟೆ ಇಲ್ಲ."

"ನಿಮ್ಮದೇ ಸುಖ. ಆಗಲಿ, ಹೆಂಡತಿಯನ್ನು ತವರುಮನೆಗೆ ಕಳಿಸುವ ವಿಷಯ ಏನಾಯಿತು?"

"ಮಾಡಬೇಕಾದ ಸಿದ್ಧತೆಯನ್ನೆಲ್ಲ ಅವಳು ಹೋದ ಮೇಲೆಯೇ ಮಾಡುವೆ. ನಾಳೆ ಅಣ್ಣ ಬಂದು ಅವಳನ್ನು ಕರೆದುಕೊಂಡು ಹೋಗುವ ನೆಂದು ಕೇಳಿದ್ದೇನೆ."

"ನೀನೂ ಒಬ್ಬ ಶುದ್ಧ ಪೆದ್ದ! ಅವಳ ಜೊತೆಗೆ ನೀನು ಬಾಳುವೆ ಮಾಡ ಲಾರೆ. ನಾನೂ ನೀನೂ ಅದಲು ಬದಲು ಮಾಡಿಕೊಂಡರೆ ಒಳಿತಾದೀತು. ನಿನಗೂ ಸುಖವಾಗಿ ನಿದ್ದೆ ಬಿದ್ದೀತು. ನನಗೂ ಹಾಗೆಯೇ."

"ಇಷ್ಟು ವಯಸ್ಸಾದರೂ ಇಂತಹ ಕೊಳಕು ಮಾತು ಬಿಟ್ಟಿಲ್ಲ ಅಲ್ಲವೆ!"

"ಮಾಡಬೇಕೆಂತ ಮಾಡುವ ಹಾಸ್ಯವಿದಲ್ಲ. ನಿಮ್ಮ ನಡತೆಯನ್ನು ಕಂಡು ಆದಕ್ಕೆ ಪ್ರಚೋದನೆಯಾಗುತ್ತಿದೆ. ಬೇಸರವಾದುದರಿಂದ ಅವರು ಮನೆಗೆ ಹೋಗುತ್ತೇವೆಂದು ಹೇಳಿರಬಹುದು. ಅದನ್ನೇ ನೀನು ಮೇಲಿಂದ ಮೇಲೆ ಹಂಗಿಸುತ್ತಿರುವೆಯಲ್ಲ! ಭವಾನಿಪುರದಲ್ಲಿನ್ನೂ ಮಾತು ಮುರಿದಿಲ್ಲ, ಅಲ್ಲವೆ? ನೀವಿಬ್ಬರು—ಅಣ್ಣ ತಂಗಿಯರೆಂದರೆ ಒಂದೇ ಮಾಲಿಕೆ ಯೊಳಗಿನ ಮಣಿಗಳು. ನನ್ನ ಊಹೆಯಂತೆ ಉಷೆ ತನ್ನ ನಿರ್ಧಾರವನ್ನು ಬದಲಿಸುವ ಲಕ್ಷಣವಿದೆ. ಆದರೆ ನೀನು ಮಾತ್ರ ಅದೇ ವಿಷಯವನ್ನೆತ್ತಿ ಕೆಣಕಬೇಡ. ಈಗ ಹೊತ್ತಾಯಿತು. ನಾಳೆ ಬರುತ್ತೇನೆ" ಎಂದವನೇ

ನಾಲ್ಕು ಹೆಜ್ಜೆ ಮುಂದೆ ಹೋದ. ಆದರೆ ಇನ್ನೇನೋ ನೆನಪಾದುದರಿಂದ ತಿರುಗಿ ಬಂದು "ಶೈಲೇಶ, ತುಸು ದಿನದ ಮಟ್ಟಿಗೆ ಸ್ವಲ್ಪ ಹೊಂದಿಕೊಂಡು ಹೋಗು. ಅವಳು ಹುಟ್ಟಿ ಬೆಳೆದುದು ಆಚಾರವಂತರಲ್ಲಿ. ಅವಳಿಗೆ ಅನಾಚಾರ ಸಹಿಸದು. ಊಟ ಉಡಿಗೆಯ ತೊಂದರೆಯೆಂಬುದೆಲ್ಲ ನೆಪ. ಶಾಕಾಹಾರವೇ ಆರೋಗ್ಯಕರ" ಎಂದವನೇ ಬೇಗಬೇಗನೆ ಹೊರಟುಹೋದ.

ಶೈಲೇಶ ಕೊಂಚ ಹೊತ್ತಿನ ತನಕ ಸ್ತಬ್ಧನಾಗಿ ನಿಂತ. ಕ್ಷೇತ್ರಮೋಹನ ಉಷೆಯ ನಿಶ್ಚಯವನ್ನು ಹೇಗೆ ಮಾರ್ಪಡಿಸಿದನೆಂಬುದೇ ಅವನಿಗೆ ಬಗೆ ಹರಿಯಲಿಲ್ಲ.

ಆಳು ಬಂದು ಊಟಕ್ಕಣಿಯಾಗಿದೆಯೆಂದು ತಿಳಿಸಿಹೋದ. ತಟ್ಟೆಯಲ್ಲಿ ತರತರದ ಪದಾರ್ಥಗಳಿದ್ದವು. ಉಷೆಯೂ ಹತ್ತಿರವೇ ಕುಳಿತಿದ್ದಳು. ಶೈಲೇಶನು ತಲೆಬಗ್ಗಿಸಿ ಉಣ್ಣತೊಡಗಿದ. ಕ್ಷೇತ್ರಮೋಹನ ಪ್ರಸ್ತಾಪಿಸಿದ ವಿಷಯವನ್ನು ಕೇಳಿ, ತಾನೂ ಒಂದೆರಡು ಸವಿಮಾತಾಡಬೇಕೆಂದು ಯೋಚಿಸಿದ. ಆದರೆ ಏನು ಮಾಡಿದರೂ ತಲೆಯೆತ್ತಲಾಗಲಿಲ್ಲ. ಸೋಮೇಂದ್ರನ ಬಗೆಗೂ ವಿಚಾರಿಸಲಿಕ್ಕಾಗಲಿಲ್ಲ. ಊಟ ಮುಗಿದ ಮೇಲೆ ಮೆಲ್ಲಗೆ ಎದ್ದು ಹೊರಗೆ ಬಂದ.

೧೩

ಮಾರನೇ ದಿನ ಬೆಳಿಗ್ಗೆ ಅವಿನಾಶ ಬಂದು ಮುಟ್ಟಿದ. ಅದೇ ಹೊತ್ತಿಗೆ ಶೈಲೇಶ ಚಹಾ ತೆಗೆದುಕೊಳ್ಳಲು ಹೋಗುತ್ತಿದ್ದ. ಮನೆಯಲ್ಲಿ ಅಪರಿಚಿತ ಮನುಷ್ಯನನ್ನು ಕಂಡು ಚಕಿತನಾಗಿ "ತಾವು ಯಾರು ?" ಎಂದು ಕೇಳಿದ.

"ನಾನು ಉಷೆಯ ತಮ್ಮ. ಅಣ್ಣ ತಾನೇ ಬರಬೇಕೆಂದು ಮಾಡಿದ್ದ. ಅನುಕೂಲವಾಗದ್ದರಿಂದ ಅಕ್ಕನನ್ನು ಕರೆದುಕೊಂಡು ಬರಲು ನನ್ನನ್ನು ಕಳಿಸಿದ್ದಾನೆ."

"ಒಳ್ಳೇದು, ಕರೆದುಕೊಂಡು ಹೋಗಿ" ಎಂದು ಶೈಲೇಶ ತನ್ನ ಕೋಣೆಗೆ ಹೋದ. ಅಲ್ಲಿ ಉಪಾಹಾರ ಅಣಿಯಾಗಿತ್ತು. ಆದರೆ ಗಂಟಲಲ್ಲಿ ಒಂದಿಷ್ಟು ಇಳಿಯುವುದೂ ಕಷ್ಟವೆನಿಸಿತು. ಹೇಗೋ ಒಂದು ಲೋಟ ಚಹಾ ಕುಡಿದಂತೆ ಮಾಡಿ ಕುರ್ಚಿಯ ಮೇಲೆ ಹೋಗಿ ಕುಳಿತ. ಸಾಮಾನೆಲ್ಲ ಅಸ್ತವ್ಯಸ್ತವಾಗಿದ್ದರೂ ಸರಿಪಡಿಸುವ ಮನಸ್ಸಾಗಲಿಲ್ಲ.

ಒಂದಲ್ಲ ಒಂದು ದಿನ ಅವಳ ತವರಿನಿಂದ ಯಾರಾದರೂ ಕರೆಯಲು ಬರುವರೆಂದು ನಿಶ್ಚಯವಾದಂತಿತ್ತು. ಆದರಿಂದ ಅವಿನಾಶ ಬಂದುದನ್ನು ನೋಡಿ ಶೈಲೇಶ ಚಕಿತನಾಗಬೇಕಾದ ಕಾರಣವೇನೂ ಇರಲಿಲ್ಲ. ಅವನು ಯಾವ ನಿರ್ಧಾರಕ್ಕೂ ಬರಲಾರದೆ ಮನಸ್ಸಿನಲ್ಲಿ ಕಳವಳಗೊಳ್ಳತೊಡಗಿದ. ಆತನ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಬಣ್ಣಿಸಲು ಬಾರದ ವಿಚಿತ್ರ ಅವಸ್ಥೆ ಅವನದಾಗಿತ್ತು.

"ಕ್ಷೇತ್ರಮೋಹನ ಇಂದು ಬೆಳಿಗ್ಗೆಯೇ ಬರತಕ್ಕವನಿದ್ದ. ಮರೆತೇ ಹೋಯಿತೋ ಅಥವಾ ಇನ್ನ್ಯಾವ ಆವಶ್ಯಕ ಕೆಲಸ ಬಂದಿತೋ ತಿಳಿಯದು. ಅವನು ಬಂದಿದ್ದರೆ ಎಲ್ಲವೂ ವಿಶದವಾಗಿ ತಿಳಿಯುತ್ತಿತ್ತು" ಎಂದು ಶೈಲೇಶ ಯೋಚಿಸಿದ. ಅವನು ಎದೆಗುಂದಿದ್ದ. ಅವನಲ್ಲಿ ಆತ್ಮವಿಶ್ವಾಸ ಉಳಿದಿರಲಿಲ್ಲ. ಕಾತರನಾಗಿ ಗಡಿಯಾರದ ಮುಳ್ಳುಗಳನ್ನೇ ದಿಟ್ಟಿಸುತ್ತಿದ್ದ. ಕ್ಷಣವೆಂದರೆ ಯುಗದಂತಾಗಿತ್ತು ಅವನಿಗೆ.

ಅಷ್ಟರಲ್ಲಿ ಬಾಗಿಲ ತೆರೆ ಸರಿಸಿ ಯಾರೋ ಒಳಗೆ ಬಂದರು. ಕ್ಷೇತ್ರಮೋಹನನೇ ಬಂದಿರಬಹುದೆಂದು ಶೈಲೇಶ ಒಮ್ಮೆಲೇ ಹೊರಳಿ ನೋಡಿದ. ಆದರೆ ಅವನು ಅವಿನಾಶ. ಉಪಾಹಾರದ ಪದಾರ್ಥಗಳನ್ನು ನೋಡಿ ಅವನು ಕುರ್ಚಿಯೊಂದನ್ನು ಹಿಂದಕ್ಕೆಳೆದುಕೊಂಡು ಕುಳಿತ. ಶೈಲೇಶನು ಕಪಾಟಿನಿಂದ ಒಂದು ಪುಸ್ತಕ ತೆಗೆದು ಓದತೊಡಗಿದ. ಮನೆಯ ಯಜಮಾನನು ತನ್ನನ್ನು ಸ್ವಾಗತಿಸುವನೆಂದು ಅವಿನಾಶನೇನೂ ತಿಳಿದಿರಲಿಲ್ಲ. ಈ ಕೋಣೆಗೆ ಏಕೆ ಬಂದೆ ಎಂದೂ ಶೈಲೇಶನು ಕೇಳದ್ದರಿಂದ ಅವಿನಾಶನೇ ಮೊದಲು ಮಾತು ತೆಗೆದ—"೨-೩೦ ರ ಗಾಡಿಯಿಂದ ಅಕ್ಕ ಹೊರಡಲಿದ್ದಾಳೆ."

ಶೈಲೇಶ ಪುಸ್ತಕದಿಂದ ದೃಷ್ಟಿ ಹೊರಳಿಸುತ್ತ—"ಹೋಗುವಳೇ ? ಅದರಲ್ಲೇನೂ ವ್ಯತ್ಯಾಸವಾಗುವಂತಿಲ್ಲ ?" ಎಂದು ಕೇಳಿದ.

ಏನೆನ್ನಬೇಕೋ ಅವಿನಾಶನಿಗೆ ತಿಳಿಯಲಿಲ್ಲ. ಆದರೆ ಅವನ ಬಾಯಿಂದ "ಇಲ್ಲ" ಎಂದು ಹೊರಬಿತ್ತು. ಬಾಗಿಲ ಬಳಿಯಲ್ಲಿ ಬಳೆಯ ಸದ್ದು ಕೇಳಿದಂತಾಗಿ ಶೈಲೇಶನ ಮನಸ್ಸು ಇನ್ನಷ್ಟು ಚಂಚಲವಾಯಿತು. "ಇಲ್ಲ; ನಾನೇನೂ ಅವಳನ್ನು ತಡೆದಿಲ್ಲ. ನಿಮ್ಮಣ್ಣ ಬರುತ್ತಾನೆಂದು ಕೇಳಿದ್ದೆ. ಅವನೇಕೆ ಬರಲಿಲ್ಲ ?"

"ನನ್ನನ್ನೂ ಕಳಿಸಬಾರದೆಂದೇ ಮಾಡಿದ್ದ ಅವನು."

" ಯಾಕೆ ? "

ಅವಿನಾಶ ಉತ್ತರ ಕೊಡಲಿಲ್ಲ.

" ನೀನಿನ್ನೂ ಹುಡುಗ. ನಿನ್ನೊಡನೆ ಎಲ್ಲ ವಿಷಯವನ್ನೂ ಹೇಳಲಾಗು ವುದಿಲ್ಲ. ಹೇಳುವುದರಿಂದ ಲಾಭವೂ ಇಲ್ಲ. ನಿನ್ನ ಅಣ್ಣನಿಗೆ ಹೇಳು— ' ಉಷೆ ಇಲ್ಲಿಂದ ಹೋಗುವುದರಲ್ಲಿ ಅವಳದೇನೂ ತಪ್ಪಿಲ್ಲ. ತಪ್ಪೆಲ್ಲ ನನ್ನದೇ. ನಾನು ಅವಳನ್ನು ಕರೆಸಿದ್ದೇ ಯೋಗ್ಯವಿರಲಿಲ್ಲ. ನನ್ನ ತಂದೆ, ಅವಳನ್ನು ಹೊರಹಾಕಿ ಮಹಾಪರಾಧ ಮಾಡಿದನೆಂದು ಭಾವಿಸಿದ್ದೆ. ಅದಕ್ಕಾಗಿ ಆ ತಪ್ಪನ್ನು ತಿದ್ದಿಕೊಳ್ಳಬೇಕೆಂದೂ ಯತ್ನಿಸಿದೆ. ನಿನ್ನ ಅಕ್ಕನನ್ನು ಕರೆತಂದು ದೇನೋ ನಿಜ. ಆದರೆ ಒಂದು ತಪ್ಪನ್ನು ತಿದ್ದಲು ಹೋಗಿ ಅನೇಕ ತಪ್ಪು ಗಳನ್ನು ಮಾಡಬೇಕಾಯಿತು.' "

ಪಾಪ ! ಅವಿನಾಶ ಇದಕ್ಕೇನು ಉತ್ತರ ಕೊಡಬಲ್ಲ ! ಅವನು ಸುಮ್ಮನೆ ಇದ್ದ. ಅಷ್ಟರಲ್ಲಿ ಬಾಗಿಲು ದೂಡಿ ಕ್ಷೇತ್ರಮೋಹನ ಒಳಹೊಕ್ಕ. ಶೈಲೇಶ ಅವನನ್ನು ನೋಡಿದ್ದೇನೋ ನಿಜ. ಆದರೆ ತನ್ನ ಬಾಯಿ ಮುಚ್ಚಿಕೊಳ್ಳಲು ಅವನಿಗೆ ಶಕ್ಯವಾಗಲಿಲ್ಲ. ಒಮ್ಮೆ ಕಠೋರರಾಗುವುದೇ ತಡ ; ಆ ಕಾಠಿಣ್ಯ ಅವರನ್ನು ಇನ್ನೂ ಕಠೋರರನ್ನಾಗಿ ಮಾಡುತ್ತದೆ. ಉಷೆ ಮರೆಗೆ ನಿಂತಿದ್ದಳು.

ಶೈಲೇಶನೇ ಮಾತು ಮುಂದುವರಿಸಿದ.–" ನಾನು ನಿನ್ನ ಅಕ್ಕನನ್ನು ಒಂದಾ ನೊಮ್ಮೆ ಮದುವೆಯಾದುದು ನಿಜ. ಆದರೆ ಅಷ್ಟರಿಂದಲೇ ಆಕೆ ಸಹಧರ್ಮಿಣಿ ಯೆಂದು ಹೇಳಲು ಬಾರದು. ನಮ್ಮಿಬ್ಬರ ಶಿಕ್ಷಣ, ಧರ್ಮ ಯಾವುದರಲ್ಲೂ ಸಮಾನತೆ ಇಲ್ಲ. ಅವಳನ್ನು ಈ ಮನೆಯಲ್ಲಿ ಇಟ್ಟುಕೊಂಡೆನೆಂದು ತಿಳಿಯೋಣ. ಈ ಮನೆಯೆಲ್ಲ ಸ್ಮೃತಿ–ಶಾಸ್ತ್ರದ ಪಾಠಶಾಲೆಯಾದೀತು. ನನ್ನ ಇದ್ದ ಒಬ್ಬ ಮಗ ಕುಸಂಸ್ಕಾರಗಳನ್ನೆಲ್ಲ ಕಲಿತುಕೊಳ್ಳಬೇಕಾದೀತು. ನನ್ನ ಒಬ್ಬಳೇ ಒಬ್ಬ ತಂಗಿಗೂ ತಂದೆಯ ಮನೆಯ ಬಾಗಿಲು ಮುಚ್ಚಿದಂತಾದೀತು. ಇದನ್ನೆಲ್ಲ ನಾನಾಗಿಯೇ ಹೇಗೆ ಹೇಳಲಿ ಎಂದು ಯೋಚನೆಯಲ್ಲಿದ್ದೆ. ಅವಳು ತಾನಾಗಿಯೇ ಹೋಗುವೆನೆಂದು ಹೇಳಿ ನನ್ನನ್ನು ಈ ಕಷ್ಟದಿಂದ ಪಾರುಮಾಡಿದ್ದಕ್ಕಾಗಿ ಕೃತಜ್ಞನಾಗಿದ್ದೇನೆ. "

ಇಂತಹ ಉದ್ಧಟ ಮಾತುಗಳನ್ನು ಕೇಳಿ ಕ್ಷೇತ್ರಮೋಹನ ಮೂಗಿನ ಮೇಲೆ ಬೆರಳಿಟ್ಟು ಅವನನ್ನೇ ದಿಟ್ಟಿಸುತ್ತ ನಿಂತ. ಶೈಲೇಶ ದುರ್ಬಲ ಸ್ವಭಾವದವನು, ಲಜ್ಜಾಶೀಲ ವ್ಯಕ್ತಿ. ಕಠೋರವಾಗಿ ಮಾತನಾಡುವುದೇ ಅವನಿಗೆ ಶಕ್ಯ

ವಿರಲಿಲ್ಲ. ಇಂತಹ ಪ್ರಾಣಿ ಇದೇನು ಆರ್ಭಟ ನಡೆಸಿದ್ದಾನೆಂದು ಕ್ಷೇತ್ರ ಮೋಹನನಿಗೆ ಬಗೆಹರಿಯಲಿಲ್ಲ. ಆದರೆ ಉಷೆಯನ್ನು ಕರೆದುಕೊಂಡು ಹೋಗಲು ಅವಳ ತಮ್ಮ ಬಂದಿದ್ದಾನೆಂದು ಅವನಿಗೆ ತಿಳಿದಿತ್ತು. ಅಲ್ಲದೆ, ಅಲ್ಲಿರುವ ಅಪರಿಚಿತ ವ್ಯಕ್ತಿಯು ಅವನೇ ಆಗಿರಬೇಕೆಂದೂ ಊಹಿಸಿದ್ದ. ಅವನ ಎದುರಿಗೇ ಶೈಲೇಶನು ಹೀಗೆ ಬಾಯಿ ಸಡಿಲುಬಿಟ್ಟದ್ದನ್ನು ನೋಡಿ ಕ್ಷೇತ್ರಮೋಹನನಿಗೆ ಇನ್ನಷ್ಟು ದುಃಖವಾಯಿತು. ಕೊನೆಗೆ ಅವನಿಗೆ ತಡೆಯಲಾಗಲಿಲ್ಲ. ಅವನು–"ಈ ಒಂದು ಮಾತು ನಿನ್ನ ಅಕ್ಕನ ಕಿವಿಗೆ ಬೀಳುವಂತೆ ಮಾಡಬೇಡ. ಇದೇ ನನ್ನ ಬಿನ್ನಹ" ಎಂದು ಆ ಅಪರಿಚಿತ ವ್ಯಕ್ತಿಗೆ ಬೇಡಿಕೊಂಡ.

"ನಾನು ಹೇಳುವುದೇ ಬೇಡ. ಅವಳು ಬಾಗಿಲ ಬಳಿಯಲ್ಲೇ ಇದ್ದಾಳೆ."

"ಆಂ, ಹೊರಗೆ ನಿಂತಿರುವಳೇ ? ಇಲ್ಲಿಯೇ ? ಹೊರಗೆ ?"

"ಹೌದು ಕ್ಷೇತ್ರಮೋಹನ, ನಾನು ಅದನ್ನು ಬಲ್ಲೆ" ಎಂದು ಶೈಲೇಶನೇ ಉತ್ತರಕೊಟ್ಟ.

ಇದನ್ನು ಕೇಳಿ ಕ್ಷೇತ್ರಮೋಹನ ತಣ್ಣಗಾದ. ಮೋರೆ ಚಿಕ್ಕದು ಮಾಡಿ ಕುಳಿತುಕೊಂಡ.

ಆ ದಿನ ಸಾಯಂಕಾಲ ಎರಡೂವರೆ ಗಂಟೆಗೆ ಅಕ್ಕನನ್ನು ಕರೆದುಕೊಂಡು ಅವಿನಾಶ ಸ್ಟೇಶನ್ನಿನತ್ತ ಹೊರಟ. ಆಗ, ಸೋಮೇಂದ್ರ ಅತ್ತೆಯ ಜೊತೆಗಿದ್ದ; ಅವನ ತಂದೆ ಕಾಲೇಜಿನಲ್ಲಿದ್ದ ; ಕ್ಷೇತ್ರಮೋಹನ ಹೈಕೋರ್ಟಿನ ಬಾರ್ ರೂಮಿನಲ್ಲಿದ್ದ.

ಮಾರನೇ ದಿನ ಚಹಾ ಕುಡಿಯುತ್ತಿರುವಾಗ ವಿಭೆ ತನ್ನ ಪತಿಯ ಕಡೆಗೆ ಕಟಾಕ್ಷವನ್ನು ಬೀರಿ "ಅಣ್ಣನೇನು ಮಾಡುತ್ತಾನೆ ? ನಿಮಗೇನಾದರೂ ಗೊತ್ತೇ ?" ಎಂದಳು.

"ಗೊತ್ತಿಲ್ಲದೆ ಏನು ? ಅವನ ಕೈಯ್ಯಲ್ಲೊಂದು ಪುಸ್ತಕವಿದೆ. ಆದರೆ ಅವನು ಪಶ್ಚಾತ್ತಾಪ ಪಡುತ್ತಿರಬಹುದು."

"ನೀವು ಈ ಕೆಲಸ ಎಂದು ಮಾಡುವಿರಿ ?"

"ಯಾವುದು ? ಪುಸ್ತಕ ಹಿಡಿಯುವುದೋ ? ಪಶ್ಚಾತ್ತಾಪ ಪಡುವುದೋ ?"

"ಪುಸ್ತಕ ಹಿಡಿಯುವುದು ನಿಮಗೆ ಒಪ್ಪುವ ಕೆಲಸವಲ್ಲ. ನಾನು ಹೇಳುತ್ತಿರುವುದು ಇನ್ನೊಂದನ್ನು ಕುರಿತು."

" ನೀನೂ ನಿನ್ನಣ್ಣನನ್ನು ಕರೆಸಿ ತಂದೆಯ ಮನೆಗೆ ಹೊರಟುಹೋದರೆ ನಾನು ಆ ಕೆಲಸ ಮಾಡುವೆ. "

ವಿಭೆಯು ಉಲ್ಹಾಸದಲ್ಲಿದ್ದುದರಿಂದ ಕೋಪಿಸಲಿಲ್ಲ. ಅವಳು " ಅದು ನನ್ನಿಂದಾಗುವ ಕೆಲಸವಲ್ಲ. ನಾನೇನು ಗೊಡ್ಡುರೂಢಿಗಳ ದಾಸಿಯಲ್ಲ ; ಜಪ, ತಪ, ಮಡಿಮೈಲಿಗೆಗಳ ಗೋಜಿಗೆ ಹೋಗುವವಳಲ್ಲ'' ಎಂದಳು.

" ಇಂತಹ ಸೌಭಾಗ್ಯ ನಿನಗೆ ಸಿಗದಿದ್ದುದು ನಿನ್ನ ದುರ್ದೈವ'' ಎಂದು ಕ್ಷೇತ್ರಮೋಹನ ಕೋಣೆಯ ಹೊರಗಾದ.

೧೪

ಶೈಲೇಶನ ಮದುವೆಯ ಪ್ರಸ್ತಾಪ ಭವಾನೀಪುರದ ಆ ಕಲಿತ ಕನ್ಯೆಯೊಡನೆ ನಡೆಯುತ್ತಲಿತ್ತು. ಗಂಡನ ಮನಸ್ಸಿಗೆ ಬೇಸರವಾದೀತೆಂದು ಭಾವಿಸಿಯೋ ಏನೋ, ವಿಭೆ ಈ ಕಾರ್ಯದಲ್ಲಿ ಬಹಿರಂಗವಾಗಿ ಸಹಕರಿಸಲಿಲ್ಲ. ಆದರೆ ತನಗಿದ್ದ ಸಹಾನುಭೂತಿಯನ್ನು ವ್ಯಕ್ತಪಡಿಸಲು ಹಿಂದೆಗೆಯಲಿಲ್ಲ. ಒಮ್ಮೆ ಕನ್ಯಾಪಕ್ಷದವರ ಸಲಹೆಯಂತೆ ಕ್ಷೇತ್ರಮೋಹನನು ಶೈಲೇಶನಿಗೆ ಕೇಳಿದಾಗ ಶೈಲೇಶನು " ಜೀವನದ ಹೆಚ್ಚಿನ ಭಾಗ ಸಂದಾಯವಾಯಿತು. ಈಗ ಉಳಿದ ಕೆಲದಿನಗಳಿಗಾಗಿ ಹೊಸ ಒಂದು ಸಮಸ್ಯೆಯನ್ನು ಕಲ್ಪಿಸಿಕೊಳ್ಳಲು ನನ್ನ ಮನಸ್ಸು ಒಪ್ಪುವುದಿಲ್ಲ. ಸೋಮೇಂದ್ರ ಹೇಗೂ ಇದ್ದಾನೆ. ನಿಮ್ಮೆಲ್ಲರ ಆಶೀರ್ವಾದದಿಂದ ಅವನು ಬಾಳಿ ಬದುಕಲಿ. ಇಂಥ ತೊಂದರೆಗಳನ್ನು ಗಂಟುಹಾಕಿಕೊಳ್ಳಲು ನನ್ನ ಮನಸ್ಸು ಒಡಂಬಡುವುದಿಲ್ಲ " ಎಂದಿದ್ದ.

ಮನುಷ್ಯ ಪ್ರಾಮಾಣಿಕನೋ ಕಪಟಿಯೋ ಎಂದು ತಿಳಿಯಲು ಹೆಚ್ಚು ಕಾಲ ಬೇಕಾಗುವುದಿಲ್ಲ. ಶೈಲೇಶನ ಈ ಮಾತು ಕೇಳಿ ಕ್ಷೇತ್ರಮೋಹನನಿಗೆ ವೇದನೆಯಾಯಿತು. ಅಂದಿನಿಂದ ದಿನವೂ ಅವನು ಕಚೇರಿಯಿಂದ ಹೊರಟೊಡನೆಯೇ ಶೈಲೇಶನಲ್ಲಿಗೆ ಹೋಗತೊಡಗಿದ. ಶೈಲೇಶನ ಮನೆಯಲ್ಲಿ ಗೃಹಿಣಿ ಇರಲಿಲ್ಲ ; ಮಕ್ಕಳಿರಲಿಲ್ಲ ; ಮೊದಲಿನ ನಲಿವು ಚಲುವುಗಳಿರಲಿಲ್ಲ. ಅದು ಒಕ್ಕಲಿಲ್ಲದ ಮನೆಯಂತೆ ತೋರುತ್ತಿತ್ತು. ಕೆಲ ನೌಕರರೇ ಕೂಡಿ

ಅಲ್ಲಿಯ ವ್ಯವಸ್ಥೆ ನೋಡುತ್ತಿದ್ದರು. ಸುಮಾರು ಒಂದು ತಿಂಗಳು ಕಳೆದ ಮೇಲೆ ಕ್ಷೇತ್ರಮೋಹನನೇ ಮಾತು ಎತ್ತಿದ—

"ಶೈಲೇಶ, ತನ್ನವರೆನ್ನುವವರು ಇದ್ದ ಹೊರತು ಮನೆ ನಡೆಯಲಾರದು. ವೃದ್ಧಾಪ್ಯದಲ್ಲಂತೂ . . . . ."

ಅಂದು ಉಮೆಯೂ ಜೊತೆಗಿದ್ದಳು. ಅವಳು "ಎಲ್ಲಿಯ ಮುಪ್ಪು ಅಣ್ಣಾ ? ಇಷ್ಟರಲ್ಲಿ ಅತ್ತಿಗೆಯೂ ಬರಬಹುದು. ಗಂಡನ ಮೇಲಿನ ಸಿಟ್ಟಿನಿಂದ ಹೆಂಡತಿ ಅಪ್ಪನ ಮನೆಯಲ್ಲೆಷ್ಟು ದಿನ ಉಳಿದಾಳು ?" ಎಂದಳು. ಆದರೆ ಅದಕ್ಕೆ ಯಾರೂ ಉತ್ತರ ಕೊಡಲಿಲ್ಲ. ಶೈಲೇಶನ ಮುಖ ಮಾತ್ರ ಇನ್ನಷ್ಟು ಬಾಡಿತು. "ಇಲ್ಲ ಉಮೆ, ಅವಳು ಇನ್ನೆಂದೂ ಬಾರಳು" ಎಂದು ಅವನು ಕೆಲ ಹೊತ್ತಿನ ನಂತರ ಹೇಳಿದನು.

"ಬಾರದೇನು ಮಾಡುತ್ತಾಳೆ ? ಇದೇ ತಿಂಗಳಲ್ಲಿ ಬಂದರೂ ಬರಬಹುದು. ನನಗೇಕೋ ಹಾಗೆನಿಸುತ್ತಿದೆ."

ಉಷೆಯು ಮರಳಿ ಬರುವುದು ಎಷ್ಟು ಕಷ್ಟಸಾಧ್ಯವೆಂದು ಉಮೆಯ ಅಣ್ಣನಿಗೆ ಗೊತ್ತಿತ್ತು. ಶೈಲೇಶನ ಪ್ರತಿಯೊಂದು ಮಾತೂ ಅವನ ಮನದಲ್ಲಿ ನಟ್ಟಿತ್ತು. ಉಷೆ ಈ ಘಟನೆಗಳನ್ನು ಎಂದಿಗೂ ಮರೆಯಲಿಕ್ಕಿಲ್ಲವೆಂದು ಅವನ ತಿಳಿವಳಿಕೆ. 'ಮೊದಲೇ ಶೈಲೇಶನ ತಂದೆ ಅವಳ ಅಪಮಾನ ಮಾಡಿದ್ದ. ಬಂದು ಕಾಲಿಟ್ಟಳೋ ಇಲ್ಲವೋ ಎನ್ನುವಷ್ಟರಲ್ಲಿ ವಿಭೆ ಅವಮಾನ ಪಡಿಸಿದಳು. ಶೈಲೇಶನೂ ಅದಕ್ಕೆ ಹಿಂದೆ ಮುಂದೆ ನೋಡಲಿಲ್ಲ. ಹೊರಟುಹೋಗುವಾಗ ಅದೆಷ್ಟು ಅಪಮಾನದ ಮಾತುಗಳನ್ನು ಅವಳು ಕೇಳಬೇಕಾಯಿತು !' ಎಂದು ಅವನು ಯೋಚಿಸಿದ. ಆದರೂ, ಬಾಲ್ಯದಿಂದಲೂ ಹಿಂದೂ ಸಂಸ್ಕೃತಿಯಲ್ಲಿ ಬೆಳೆದ ಹೆಣ್ಣು ಒಮ್ಮೆಲೆ ಗಂಡನ ಮನೆಯನ್ನು ತಿರುಗಿ ಸೇರಲಿಕ್ಕಿಲ್ಲವೆಂದು ಹೇಳಲು ಧೈರ್ಯವಾದೀತೆ? ಅವಳು ಎಷ್ಟೋ ಅಪಮಾನಗಳನ್ನು ನುಂಗಿದ್ದಳು. ಆದರೆ ಧರ್ಮದ ವಿಷಯದಲ್ಲಿ ಮಾತ್ರ ಅವಳಿಂದ ಸಹಿಸಲಾಗಲಿಲ್ಲ. ಎಷ್ಟೋ ವರ್ಷಗಳ ನಂತರ ಗಂಡ ಕರೆದಾಗಲೂ ಯಾವ ಅಭಿಮಾನ, ತಾತ್ಸಾರಗಳನ್ನೂ ಲೆಕ್ಕಿಸದೆ ಅವಳು ಬಂದಿದ್ದಳು. ಹಿಂದೆ ಮುಂದೆ ನೋಡದೆ, ಇಲ್ಲದ ಸಲ್ಲದ ಯೋಚನೆಗಳಲ್ಲಿ ಮುಳುಗದೆ, ಗಂಡನ ಅಪ್ಪಣೆ ಶಿರೋಧಾರ್ಯವೆಂದು ಭಾವಿಸಿ ಬಂದಿದ್ದಳು.

ಕ್ಷೇತ್ರಮೋಹನನಾದರೂ ಅಷ್ಟೆ, ರೂಢಿಯ ಮೌಢ್ಯದಲ್ಲಿ ಮುಳುಗಿದ

ಮನುಷ್ಯನಲ್ಲ. ಬೆಳಕು ಎಲ್ಲಿಂದ ಬಂದರೂ ಸಂಗ್ರಹಿಸಬೇಕೆಂಬ ಮನೋವೃತ್ತಿ ಆತನದು. ಹೊಸತರೊಳಗಿನ ಒಳಿತನ್ನು ತೆಗಳುವ ಸ್ವಭಾವದವನಲ್ಲ ಅವನು. ಆದರಿಂದ ಹಿಂದೂ ನಾರಿಯರ ಧರ್ಮಾಚರಣೆಯ ರೀತಿ ಅವನಿಗೆ ಹೊಸತು. ಅವನು ಉಷೆಯ ಗೃಹವ್ಯವಸ್ಥೆಯ ಜೊತೆಗೆ ತನ್ನದನ್ನು ಹೋಲಿಸಿದ. ಸುಧಾರಿಸಿದವರೆಂದು ಜಂಭಕೊಚ್ಚಿಕೊಳ್ಳುವವರಲ್ಲಿ ತಕ್ಕಷ್ಟು ಆಂತರ್ಯದ ಶಕ್ತಿ ಇಲ್ಲವೆಂದು ತಿಳಿದ. ಉಷೆಯಲ್ಲಿರುವ ಸಹಿಷ್ಣುತೆ ವಿಭೆಯಲ್ಲಿ ಎಲ್ಲಿದೆ, ಉಮೆಯಲ್ಲಿ ಎಲ್ಲಿದೆ ? ನಮ್ಮ ಸಮಾಜದ ಸಭ್ಯ ಸ್ತ್ರೀಯರಲ್ಲಿ ಎಲ್ಲಿದೆ ? ಇವನ್ನೆಲ್ಲ ನೆನಸಿ ಸಂಕೋಚದಿಂದ, ಭಕ್ತಿ ಶ್ರದ್ಧೆಗಳಿಂದ, ಅವನ ಹೃದಯ ತುಂಬಿಹೋಯಿತು. ಅವಳು ತನ್ನ ಗಂಡನನ್ನಷ್ಟೆ ಪ್ರೀತಿಸುತ್ತಿದ್ದಳೆಂಬುದನ್ನು ಅವನು ಅರಿತಿದ್ದ. ಕೇವಲ ಮುಸಲ್ಮಾನ ನೌಕರನೊಬ್ಬನ ಸಲುವಾಗಿ ಈ ಪ್ರೇಮ ಶ್ರದ್ಧೆಗಳಿಗೆ ತಿಲಾಂಜಲಿ ಕೊಡಬೇಕಾಗಿ ಬಂದಿತಲ್ಲಾ ಎಂದು ಆವನಿಗೆ ಸಂತಾಪವಾಯಿತು.

“ ಅಣ್ಣಾ, ಇನ್ನೂ ಏಕೆ ಮಾತಾಡಲೊಲ್ಲೆ ? ”



“ ಆಂ, ಏನು ? ಏನೆಂದೆ ? ”

“ ಅತ್ತಿಗೆ ಇದೇ ತಿಂಗಳಲ್ಲಿ ಬರಬಹುದಲ್ಲವೆ ? ನಿನಗೆ ಹೇ[illegible] ತೋರುತ್ತದೆ ? ”

“ ಅವಳು ಬರುವುದಿಲ್ಲವೆಂದೇ ತಿಳಿಯೋಣ. ಇಲ್ಲಿಗೆ ಬರದಿದ್ದರೂ ಅವ[illegible] ಜೀವನ ನಡೆಯಬಹುದಲ್ಲವೇ ? ಎಷ್ಟೋ ದಿನಗಳಿಂದ ನಡೆದಿದೆ. ಇನ್ನು[illegible] ಕೆಲವು ದಿನಗಳಲ್ಲೇನಾಗಬೇಕಾಗಿದೆ ? ಅವಳು ಬಾರದೆ ನಡೆಯದೇ[illegible] ಅದಕ್ಕಾಗಿ ಬೇರೊಂದು ಹಂಚಿಕೆ ಹುಡುಕಬೇಕಾಗಿದೆ. ”

ಉಮೆಗೆ ಅದರ ಅರ್ಥವಾಗಲಿಲ್ಲ. ಆದ್ದರಿಂದ ಅವಳು ಸುಮ್ಮ[illegible] ನೋಡುತ್ತ ಕುಳಿತಳು.

ಆಗ ಶೈಲೇಶ— “ ಉಮೆ, ಅವಳು ತಿರುಗಿ ಬರುವುದು ಅಷ್ಟು ಉಚಿ[illegible] ವೆಂದು ನನಗೆ ತೋರುವುದಿಲ್ಲ. ಅವಳು ನನ್ನನ್ನು ಮದುವೆಯಾದುದೇನೊ[illegible] ನಿಜ. ಆದರೆ ಅವಳು ನನ್ನ ಸಹಧರ್ಮಿಣಿಯಲ್ಲ ” ಎಂದ.

ಇದನ್ನು ಕೇಳಿ ಕ್ಷೇತ್ರಮೋಹನನಿಗೆ ಬೇಸರವೆನಿಸಿತು— “ ಶೈಲೇಶ, ನಮ್ಮಲ್ಲಿ ಧರ್ಮವೇ ಇಲ್ಲದಿರುವಾಗ ಸಹಧರ್ಮ ಎಲ್ಲಿಂದ ಬಂತು ? ಅಂತಹ ಆಗದ ಹೋಗದ ಧರ್ಮದ ಮಾತು ತೆಗೆಯಬೇಡ. ಮನೆಯ ವ್ಯವಸ್ಥೆಯಾದರೂ ಸರಿಯಾಗಿ ಸಾಗಬಹುದಾದ ಧರ್ಮಸೂತ್ರವೊಂದನ್ನು ಸೂಚಿಸಲೇ ? ”

“ ಏನು, ನಮಗೆ ಧರ್ಮವಿಲ್ಲವೆನ್ನುವೆಯೊ ? ”

“ಧರ್ಮವಿದ್ದುದಾದರೆ ಕೊಂಚ ತೋರಿಸಬಾರದೆ? ಹೊಟ್ಟೆಯ ಪಾಡಿಗಾಗಿ ದುಡಿಯುತ್ತೇವೆ, ಹಸಿವು ಆಗುವುದರಿಂದ ಊಟ ಮಾಡುತ್ತೇವೆ, ನಿದ್ದೆ ಬರುವುದರಿಂದ ಮಲಗುತ್ತೇವೆ. ಅಲ್ಲಿಗೆ ಮುಗಿಯಿತು. ಸಹಧರ್ಮಿಣಿ ಇಲ್ಲದಿದ್ದರೂ ನಮ್ಮ ಈ ಕೆಲಸ ನಡೆಯುತ್ತದೆ. ಹಿಂದಿನ ಜನ ಯಜ್ಞಮಾಡುತ್ತಿದ್ದರು; ಜಪ-ತಪ, ಪೂಜೆ-ಪುನಸ್ಕಾರ ನಡೆಸುತ್ತಿದ್ದರು; ಧರ್ಮಕಾರ್ಯದಲ್ಲಿಯೇ ತೊಡಗುತ್ತಿದ್ದರು. ಅಂತಹರಿಗೆ ಸಹಧರ್ಮಿಣಿಯ ಅವಶ್ಯಕತೆ ಇತ್ತು. ”

“ ಹಾಗಾದರೆ ಸಹಧರ್ಮಿಣಿಯ ಅರ್ಥವೆಂದರೆ ಅಷ್ಟೇಯೊ —ಯಾಗ ಯಜ್ಞ, ಪೂಜೆ ಪುನಸ್ಕಾರ ? ”

“ ಅದೇ ಅರ್ಥ. ಅದರ ಹೊರತು ಬೇರೆ ಯಾವ ಅರ್ಥವೂ ಇಲ್ಲ. ನೀನೂ ಹಿಂದು, ನಾನೂ ಹಿಂದು. ಆದರೆ ನಾವು ಪೂಜೆಯನ್ನೂ ಮಾಡುವುದಿಲ್ಲ, ದೇವಸ್ಥಾನಕ್ಕೂ ಹೋಗುವುದಿಲ್ಲ. ರಾಮ ಕೃಷ್ಣ ಮುಂತಾದವರ ಗದ್ದಲದಲ್ಲಿ ಬಿದ್ದು ಅವರ ಭಜನ ಮಾಡುವ ಕಷ್ಟವೂ ಇಲ್ಲ ನಮಗೆ. ನಮ್ಮ ಸ್ತ್ರೀಯರಂತೂ ಪಾಪ, ನಿರುಪದ್ರವಿಗಳು ! ನಮಗಾದರೋ ಬೇರೆಯವರ ತಂಟೆ ತಕರಾರುಗಳಿಗೆ ಹೋಗಬೇಕಾದುದಿಲ್ಲ. ಯಾರ ಗೋಜೂ ಬೇಡವಾದ ಸಭ್ಯರು ನಾವು ! ಶೈಲೇಶ, ಭವಾನೀಪುರದವರು ನಮ್ಮ ಜೀವ ಹಿಂಡುತ್ತಿದ್ದಾರೆ. ನಿನ್ನ ತಂಗಿಗೂ ಆ ಸಂಬಂಧವು ಮನಸ್ಸಿದೆ. ನಿನಗೆ ಒಪ್ಪಿಗೆಯೋ, ತಿಳಿಸು. ಯಾರನ್ನೂ ನಿರಾಶೆಗೊಳಿಸಬೇಡ. ”

“ ಕ್ಷೇತ್ರಮೋಹನ, ಸುಮ್ಮನೆ ಪರಿಹಾಸ ಮಾಡುತ್ತೀಯಲ್ಲ? ” ಎನ್ನುತ್ತ ಶೈಲೇಶ ಎದ್ದ. ಅವನ ಮೋರೆ ನೋಡಲೂ ಮನಸ್ಸಾಗುತ್ತಿರಲಿಲ್ಲ.

“ ಇಲ್ಲವಣ್ಣಾ ಇಲ್ಲ. ಶೈಲೇಶ, ಇದು ಪರಿಹಾಸವಲ್ಲ. ಇದು ನಿನ್ನ ಪರಿಹಾಸವಾದರೆ, ನನ್ನ ನಿಜವಾದ ಅಭಿಪ್ರಾಯದಂತೆ, ಅದರ ಜೊತೆಗೆ ನನ್ನದೂ ಪರಿಹಾಸ ಮಾಡಿಕೊಂಡಂತೆಯೇ ಅಲ್ಲವೇ ? ”

ಶೈಲೇಶ ಮರುಮಾತಾಡಲಿಲ್ಲ, ಸ್ತಬ್ಧನಾಗಿ ನಿಂತುಬಿಟ್ಟ.

ಈ ಮಾತು ಮುಂದುವರಿಸುವುದು ಒಳಿತೆಂದು ಕ್ಷೇತ್ರಮೋಹನನಿಗೂ ತೋರಲಿಲ್ಲ. ಅವನು 'ಶೈಲೇಶನ ಕ್ರೋಧ ಈರ್ಷೆಗಳು ಇಳಿಯಲಿ; ಒಂದು ವಾರ ಬಿಟ್ಟು ನೋಡುವಾ. ಆ ಮೇಲೆ ಎಂದಾದರೂ ಬಂದು ಭವಾನೀಪುರದ ಮಾತು ತೆಗೆದರಾಯಿತು' ಎಂದು ಯೋಚಿಸಿ ಉಮೆಯನ್ನು ಕರೆದುಕೊಂಡು ಹೊರಬಿದ್ದ. ಆದರೆ ಅದೇ ವಾರ ಇನ್ನೊಂದು ಹೈ ಕೋರ್ಟಿನಲ್ಲಿ ಕೆಲಸ ವಿದ್ದುದರಿಂದ ಅವನು ಕಲಕತ್ತೆ ಬಿಟ್ಟು ಹೋಗಬೇಕಾಯಿತು. ಹೋಗುವಾಗ ವಿಭೆಗೆ 'ಶೈಲೇಶನ ಲಗ್ನವಾಗುವ ಸೂಚನೆ ಕಂಡುಬರುತ್ತಿದೆ'ಯೆಂದು ಸಮಾಧಾನ ಹೇಳಿ ಹೋದ.

ಬಹಳ ದಿನಗಳ ನಂತರ ಇಂದು ದಂಪತಿಗಳು ಮಾತಾಡತೊಡಗಿದ್ದಾರೆ. ಉಮೆಯಿಂದ ಹಲಕೆಲವು ಸುದ್ದಿಗಳನ್ನು ವಿಭೆ ಕೇಳಿಕೊಂಡಿದ್ದಳು.

" ನೀವು ಉಷೆಯ ಬಗೆಗೆ ಆದರವುಳ್ಳವರೆಂದು ಕೇಳಿದ್ದೆ. ಆದರೆ ಅಣ್ಣನ ಮದುವೆಗೆ ಪ್ರಸ್ತಾವನೆ ಬರೆದವರೂ ನೀವೇ. "

" ಒಂದು ತಿಂಗಳ ಹಿಂದೆ ನನಗೂ ಈ ಯೋಚನೆ ಇದ್ದಿಲ್ಲ. ಹಾಗಾದರೆ ಒಳಿತಾದೀತೆಂದು ಈಗ ಭಾವಿಸಿದ್ದೇನೆ. ನಾನು ಈಗಲೂ ಉಷೆಯ ಹಿತ ಚಿಂತಕನೆಂಬುದು ನಿಜ. ಅಲ್ಲದೆ ಅವಳು ಯಾವಾಗಲೂ ನೆಮ್ಮದಿಯಾಗಿರ ಲೆಂದು ಹಾರೈಸುವೆ. ಆದುದರಿಂದ ಆಗದ–ಹೋಗದ ಮಾತಿಗಾಗಿ ತಲೆ ಹಾಳುಮಾಡಿಕೊಳ್ಳುವುದೇಕೆ ? "

" ನೀವೇನು ? —ಗಂಡಸರು. ನಿಮಗೆ ತಿಳಿಯುವುದೇನು ಮಣ್ಣು ? ಅವಳು ಬಂದ ದಿನವೇ ಅವಳ ಯೋಗ್ಯತೆ ಇಷ್ಟೇ ಎಂದು ಕಂಡುಹಿಡಿದೆ. ಈಗಲಾದರೂ ಗೊತ್ತಾಯಿತೇ ? ಅವಳೊಡನೆ ದಿನ ತಳ್ಳುವುದು ನಮ್ಮಿಂದ ಸಾಧ್ಯವೇ ಇರಲಿಲ್ಲ. "

" ವಿಭಾ, ಈ ಮಾತನ್ನು ಕಣ್ಣಾರೆ ಕಂಡೆ. ಅದಕ್ಕಾಗಿಯೇ ಅವಳು ಓಡಿಹೋಗಬೇಕಾಯಿತು. ಅಲ್ಲದೆ, ನಾವೆಲ್ಲ ಬೇರೆ ಬೇರೆ ದೃಷ್ಟಿಕೋನಗಳಿಂದ ಅವಳನ್ನು ಕಂಡಿದ್ದೇವೆ. ಕೆಲಸುಟ್ಟಿಗೆ ನನ್ನ ಅಭಿಪ್ರಾಯವೂ ತಪ್ಪಾಗಿರ ಬಹುದು. "

" ಹೋಗಲಿ ಬಿಡಿ, ನೀವು ದಾರಿಗೆ ಬಂದಿರೋ ಇಲ್ಲವೋ ? ಅಷ್ಟೇ

ಸಾಕು. ಜಪ-ತಪ, ರೂಢಿ–ಮೌಢ್ಯಗಳನ್ನೇ ಪ್ರಶಂಸಿಸುತ್ತಿರುವ ನಿಮ್ಮನ್ನು ಕಂಡು ನನಗೂ ಹೆದರಿಕೆಯಾಗಿತ್ತು. ನಾವೇನು ಮುಸಲ್ಮಾನರಲ್ಲ; ಕ್ರಿಸ್ತೀಯರೂ ಅಲ್ಲ. ಆದರೂ ತಾನೇ ಮೇಲೆಂದು ಅವಳು ಹೆಮ್ಮೆಪಡುವುದೇಕೆ ? ಹೆರರು ಮುಟ್ಟಿದ್ದನ್ನು ಏಕೆ ತಿನ್ನಬಾರದು ? ಇವೆಲ್ಲ ಅವಳ ಮನೆಯಲ್ಲಿ ನಡೆಯಬೇಕೇ ಹೊರತು ಇಲ್ಲಿ ನಡೆಯಲಾಗದು. ಅದೆಂಥ ಗೊಡ್ಡು ವಿಚಾರ ! ಗೊಡ್ಡು ಆಚಾರ !! ಆದ್ದರಿಂದಲೇ ಗಂಡನ ಮನೆಯಿಂದ ಹೊರಬೀಳಬೇಕಾಯಿತು. ”

ಈ ಮಾತು ದಿಟವೂ ಅಲ್ಲ, ಸಟೆಯೂ ಅಲ್ಲ. ಸಟೆದಿಟಗಳ ಸಮ್ಮಿಶ್ರಣವದು. ಒಂದರಿಂದ ಇನ್ನೊಂದನ್ನು ಬೇರ್ಪಡಿಸುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಕ್ಷೇತ್ರಮೋಹನ ಸುಮ್ಮನುಳಿದ.

ಅಷ್ಟರಲ್ಲಿ ಉಮೆ ಬಂದು —“ ಅಣ್ಣಾ, ಏನು ಸುದ್ದಿ ? ” ಎಂದಳು.

ವಿಭೆಯೇ ಮಾತು ಮುಂದರಿಸಿದಳು—“ ಅತ್ತಿಗೆಗೆ ಜಾತಿಯೊಂದೇ ಅಷ್ಟು ಪ್ರಾಧಾನ್ಯವಾಗಿರಬೇಕೇ ? ಅಣ್ಣನು ಅವಳನ್ನು ನನ್ನ ಸಲುವಾಗಿಯೇ ಹೊರಗಟ್ಟಿದನೆಂಬ ನಿಮ್ಮ ಆರೋಪವನ್ನು ಸತ್ಯವೆಂದೇ ಒಮ್ಮೆ ಭಾವಿಸೋಣ. ಅಷ್ಟಕ್ಕಾಗಿ ನೀವು ಕೂಡ ಎಲ್ಲರೆದುರು ನನ್ನನ್ನು ಅವಮಾನಿಸಿಲ್ಲವೇ ? ನೀವು ನನ್ನ ಮಾನ ತೆಗೆದಿರೆಂದು ನಾನು ಒಮ್ಮೆಲೇ ಹೆತ್ತವರ ಮನೆಗೆ ಓಡಿಹೋಗಿದ್ದರೆ ನಿಮಗೇನೆನಿಸುತ್ತಿತ್ತು ? ”

“ ಅಲ್ಲ, ನನ್ನ ಅಭಿಪ್ರಾಯ ಹಾಗೇನಿಲ್ಲ ! ”

“ ಹೌದು, ನೀವು ಹಾಗೆ ಹೇಳಲಾರಿರೆಂದು ಬಲ್ಲೆ ” ಎಂದು ಉಮೆಯನ್ನುದ್ದೇಶಿಸಿ “ ನಿಮ್ಮಣ್ಣ ಹೊರಭಾಗವನ್ನಷ್ಟೇ ನೋಡಿ ಮೋಸಹೋದರು. ನಮಗಾದರೋ ಹಿಂದೂ ಧರ್ಮದಲ್ಲಿ ಪ್ರಚಾರದಲ್ಲಿರುವ ರೂಢಿಯ ಶಿಕ್ಷಣ ದೊರಕಲಿಲ್ಲ, ನಿಜ. ತಾಯ್ತಂದೆಗಳಿಂದ ನಾವು ಸತ್ಯಶಿಕ್ಷಣ ಪಡೆದೆವು. ಆದ್ದರಿಂದ ನೀನು ಅತ್ತಿಗೆಯ ಹತ್ತಿರ ಹೋಗಿ ಕೊಂಚ ಶಿಕ್ಷಣ ಪಡೆದು ಬರಬೇಕೆಂದು ನಿಮ್ಮಣ್ಣನವರ ಇಚ್ಛೆಯಿತ್ತು. ತಂಗೀ, ಏನೇನು ಕಲಿತೆ, ಇನ್ನೆಷ್ಟು ಕಲಿಯುವುದಿದೆ, ಎಂಬುದನ್ನೆಲ್ಲ ವಿವರವಾಗಿ ನಿಮ್ಮ ಅಣ್ಣನಿಗೆ ನಿವೇದಿಸು ” ಎಂದು ನಕ್ಕು ಹೊರಗೆ ಹೊರಟುಹೋದಳು.

ಕ್ಷೇತ್ರಮೋಹನ ಸುಮ್ಮನೇ ಕುಳಿತಿದ್ದ. ತಂಗಿಯ ಎದುರು ಹೆಂಡತಿ ಆಡಿದ ಮಾತು ನೇರವಾಗಿ ಹೃದಯದಲ್ಲಿ ಚುಚ್ಚಿ ಅವನಿಗೆ ದುಃಖವಾಯಿತು.

ಹಿಂದುಗಳ ಅನೇಕ ಆಚಾರಗಳನ್ನು ಅವನು ಅನುಸರಿಸುತ್ತಿರಲಿಲ್ಲವಾದರೂ ಸ್ತ್ರೀಯರ ಶ್ರದ್ಧೆಯ ಕುರಿತು ಅವನಿಗೆ ಗೌರವವಿತ್ತು. ಆ ಗೌರವದ ಮೂಲಕ ವಾಗಿಯೇ ಉಷೆಯ ಆಚರಣೆಯನ್ನು ಕಂಡು ಅವನಿಗೆ ಹೆಮ್ಮೆಯೆನಿಸಿತ್ತು. ಈಗ ಅವಳ ಸಲುವಾಗಿ ಅವನು ತಲೆ ಕೆಳಗೆ ಹಾಕಬೇಕಾಯಿತು. ' ಆತ್ಮೀಯ ರಲ್ಲೆಲ್ಲ ಹಿಂದೂ ಧರ್ಮದ ಆದರ್ಶ ನೋಡುವುದಾದರೆ, ಉಷೆಯ ಅನುಕರಣ ವನ್ನು ಜನ ಮಾಡಿದಷ್ಟು ಕ್ಷೇಮ ' ಎಂದಿದ್ದ ಅವನು. ಆದರೆ ಈಗ ಅವನಿಗೆ ಮಾತಾಡಲು ದಾರಿ ಉಳಿಯಲಿಲ್ಲ.

" ಉಷೆಯ ಕೃತಿ ವೈಯ್ಯಕ್ತಿಕ. ಅವಳಿಗೆ ಅವಳೇ ಹೊಣೆ, ಇನ್ನಾರೂ ಅಲ್ಲ. ಅವಳ ಕೃತಿಯಿಂದ ಯಾರಿಗೂ ಹಾನಿಯಾಗಿಲ್ಲ ' ವೆಂದು ಹೇಳಿಬಿಟ್ಟೆ ರಾಯಿತೆಂದು ಒಮ್ಮೆ ಯೋಚಿಸಿದ. ಆದರೆ ಬಾಯಿಂದ ಮಾತೇ ಹೊರಡಲಿಲ್ಲ. ಕೆಲಹೊತ್ತಿನ ಮೇಲೆ ತಂಗಿಗೆ " ರೂಢಿ ಕೆಟ್ಟದ್ದು. ಹಿಂದೂ ಧರ್ಮದಿಂದ ಈ ದೋಷ ತೊಲಗಲೇ ಬೇಕೆಂಬುದು ನಿಜ. ಆದರೆ ಆ ರೂಢಿಯ ದಾಸರಿಗಿಂತ ಎಷ್ಟೋ ವಿಷಯಗಳಲ್ಲಿ ನಾವು ಕೀಳಾಗಿದ್ದೇವೆಂಬುದು ಮಾತ್ರ ಸುಳ್ಳಲ್ಲ!" ಎಂದ.

ಅಣ್ಣ ಅತ್ತಿಗೆಯರಲ್ಲಿ ಇಂತಹ ವಾದವಿವಾದ ಯಾವಾಗಲೂ ನಡೆಯು ತ್ತಿದ್ದಿತು. ಆಗಲೂ ಉಮೆ ತನ್ನ ಅಭಿಪ್ರಾಯ ಪ್ರಕಟಿಸುತ್ತಿರಲಿಲ್ಲ. ಈಗಲೂ ಹಾಗೆಯೇ ಸುಮ್ಮನಿದ್ದಳು.

ಕ್ಷೇತ್ರಮೋಹನ ತನ್ನ ಕೆಲಸಕ್ಕಾಗಿ ಅಂದೇ ರಾತ್ರಿ ಹೋಗಬೇಕಾಗಿತ್ತು. ಅವನು ಹೋಗುವ ಮುನ್ನ ವಿಭೆಯನ್ನು ಕರೆದು " ನನಗೆ ತಿರುಗಿ ಬರಲು ೫-೬ ದಿನವಾದೀತು. ಅಷ್ಟರಲ್ಲಿ ಹೆಣ್ಣಿನ ಕಡೆಯುವರು ಯಾರಾದರೂ ಸಿಕ್ಕಿದರೆ ಶೈಲೇಶ ಮದುವೆಯಾಗದಿರುವ ನಿಶ್ಚಯವನ್ನು ಇನ್ನೂ ಮಾಡಿಲ್ಲವೆಂದು ತಿಳಿಸು '' ಎಂದನು.

" ಹಾಗಾದರೆ ಅತ್ತಿಗೆ ಇನ್ನು ತಿರುಗಿ ಬರಲಾರಳು ? "

" ಇಲ್ಲ. ಯೋಚಿಸಿದಂತೆಲ್ಲ ನನಗೆ ಶೈಲೇಶನಿಗಿಂತ ಅವಳ ಅಪರಾಧವೇ ಹೆಚ್ಚೆಂದು ತೋರುತ್ತಿದೆ. ನೀನು ಹೇಳಿದ್ದು ಸರಿ. ಶಿಕ್ಷಣದಿಂದ ಸ್ವಾರ್ಥ, ಸಂಕುಚಿತ ಮನೋವೃತ್ತಿಗಳೇ ಬೆಳೆಯುವುದಾದರೆ ಅಂತಹ ಶಿಕ್ಷಣದಿಂದ ಸಾರ್ಥಕವೇನು ? ಅಂತಹ ಶಿಕ್ಷಣ ಹಿಂದಿನ ಕಾಲದಲ್ಲಿ ಮಾನ್ಯತೆ ಪಡೆದಿದ್ದರೂ ಪಡೆದಿರಬಹುದು. ಆದರೆ ಈಗ ಅದು ಪ್ರಯೋಜನಕಾರಿಯಲ್ಲ. ನಮ್ಮಲ್ಲಿ ಯಂತೂ ಅದರ ಪ್ರಚಾರವಾಗಬಾರದು. ಉಷೆಯಲ್ಲಿ ಆಚಾರ ವಿಚಾರದ

ವಿಡಂಬನೆಯಿತ್ತು, ತಥ್ಯವಿರಲಿಲ್ಲ. ತಥ್ಯವಿದ್ದುದಾದರೆ ಅವಳು ಎಂದಿಗೂ ಮನೆ ಬಿಡುತ್ತಿರಲಿಲ್ಲ. ಇರಲಿ. "

ತನ್ನ ಕೆಲಸ ಮುಗಿಸಿಕೊಂಡು ತಿರುಗಿ ಬರಲು ಕ್ಷೇತ್ರಮೋಹನನಿಗೆ ಹತ್ತು ದಿನವಾಯಿತು. ಮನೆಯಲ್ಲಿ ಕಾಲಿಟ್ಟೊಡನೆಯೇ ಉಮೆಯು ಕಣ್ಣಿಗೆ ಬಿದ್ದಳು. ಶೈಲೇಶ ಆರು ತಿಂಗಳ ರಜೆ ಪಡೆದುಕೊಂಡು ಪುನಃ ಪ್ರಯಾಗಿಗೆ ಹೋಗಿರುವ ನೆಂದು ಅವಳಿಂದ ತಿಳಿಯಿತು. ಅವನು ಹೋಗಿ ಎರಡೇ ದಿನವಾಗಿತ್ತು. ಜೊತೆಗೆ, ಶಾಲೆಯಿಂದ ಮಗನ ಹೆಸರನ್ನು ತೆಗೆಯಿಸಿ ಅವನನ್ನೂ ಕರೆದು ಕೊಂಡು ಹೋಗಿದ್ದ.

" ಒಮ್ಮಿಂದೊಮ್ಮೆಯೇ ಇದೇನು ಮಾಡಿಬಿಟ್ಟ. " ಎಂದ ಕ್ಷೇತ್ರಮೋಹನ.

" ಏನೋ ತಿಳಿಯದು ! ದೇಹಸ್ಥಿತಿ ಚನ್ನಾಗಿಲ್ಲವೆಂದರು. ಸೋಮೇಂದ್ರ ನನ್ನು ಕರೆದುಕೊಂಡು ಹೋಗಲು ಇಲ್ಲಿಗೆ ಬಂದಿದ್ದರು. "

" ದೇಹಸ್ಥಿತಿಯೋ ಮನಸ್ಸೋ ಯಾರು ಬಲ್ಲ ! " ಎಂದು ಉದ್ಗರಿಸಿದ ಕ್ಷೇತ್ರಮೋಹನ.

## ೧೬

ಇತರ ಜೂನಿಯರ್ ಬ್ಯಾರಿಸ್ಟರರಂತೆಯೇ ಕ್ಷೇತ್ರಮೋಹನನ ದಿನಚರಿ ಸಾಗುತ್ತಿತ್ತು. ಕೈಯಲ್ಲಿ ಹಣವಿಲ್ಲದಿದ್ದಾಗ ಪ್ರಾಚೀನ ಹಿಂದುಗಳ Simple living, High thinking ವಾಸಿ ಎನ್ನುತ್ತಿದ್ದ. ಹಣವಿದ್ದಾಗ ಅವನ ಕೈಹಿಡಿಯುವವರೇ ಇದ್ದಿಲ್ಲ. ನಿಜವಾಗಿಯೂ ಅವನು ಶೈಲೇಶನ ಹಿತಚಿಂತಕ ನಾಗಿದ್ದ. ಅವನ ಸ್ವಭಾವವನ್ನು ಅರಿತಿದ್ದ. ಅಂತಹ ದುರ್ಬಲ ಮನಸ್ಸಿನ ಮನುಷ್ಯನಿಂದ ಯಾವ ಕೆಲಸ ತೆಗೆದುಕೊಳ್ಳುವುದೂ ಸುಲಭ. ಆದ್ದರಿಂದಲೇ ಭವಾನಿಪುರದ ಸಂಬಂಧ ಒದಗಿಬರಬಹುದೆಂದು ಅವನಿಗೆ ಆಸೆಯಿತ್ತು. ಶೈಲೇಶ ಪಾಶ್ಚಿಮಾತ್ಯ ದೇಶಗಳನ್ನೊಮ್ಮೆ ಸುತ್ತಿಬಂದರೆ ಮದುವೆಗೆ ಒಪ್ಪಿಯೇ ಬಿಡುತ್ತಾನೆಂದು ಹೆಣ್ಣಿನ ಕಡೆಯವರಿಗೆ ಕ್ಷೇತ್ರಮೋಹನ ಹೇಳಿದ್ದ. ಉಷೆ ಯನ್ನು ಕುರಿತು ಅವನಿಗೆ ಮೊದಲಿನಂತೆಯೇ ಸ್ನೇಹವಿತ್ತು, ಶ್ರದ್ಧೆಯಿತ್ತು.

ಆದರೆ ಅವಳು ತಿರುಗಿ ಬರುವ ಆಸೆ ಇರಲಿಲ್ಲ. "ಅವಳು ಎಲ್ಲಿಯೇ ಇರಲಿ, ಸುಖದಿಂದಿರಲಿ, ಸಮಾಧಾನದಿಂದ ಇರಲಿ. ಅವಳ ಧರ್ಮಶ್ರದ್ಧೆ ಉತ್ತರೋತ್ತರ ಬೆಳೆಯಲಿ. ಏನೇ ಆದರೂ ಶೈಲೇಶನ ಗೃಹಕೃತ್ಯದಲ್ಲಿ ಮಾತ್ರ ಅವಳಿಗೆ ಸ್ಥಾನವಿಲ್ಲ" ಎಂದುಕೊಳ್ಳುತ್ತಿದ್ದ ಅವನು.

ಅವನು ಅವಳ ಎಲ್ಲ ಕೃತಿಯನ್ನೂ ತನ್ನ ಮನದ ತಕ್ಕಡಿಯಲ್ಲಿ ತೂಗುತ್ತಿದ್ದ—"ಉಷೆ ಪತಿಯನ್ನು ಪ್ರೀತಿಸಲಿಲ್ಲ. ಅದು ಅವಳಿಗೆ ಅಸಾಧ್ಯವಾಗಿರಬೇಕು. ಚಿಕ್ಕಂದಿನಿಂದ ಕಠೋರ ಆಚಾರ ವಿಚಾರಗಳಲ್ಲಿ ಬೆಳೆದವಳು. ಅದರಿಂದ ಅವಳಿಗೆ ಈ ಲೋಕದ ಚಿಂತೆಗಿಂತ ಪರಲೋಕದ ಚಿಂತೆಯೇ ಹೆಚ್ಚಾಗಿರಬೇಕು. ಆದ್ದರಿಂದಲೇ ಅವಳು ಇಷ್ಟು ಸುಲಭವಾಗಿ ಗಂಡನನ್ನು ಬಿಟ್ಟುಹೋದಳು. ತನ್ನ ಕರ್ತವ್ಯವೆಂದು ತಿಳಿದುದರಿಂದಲೇ ಅವಳು ಸೋಮೇಂದ್ರನನ್ನು ಅಷ್ಟು ಆತ್ಮೀಯತೆಯಿಂದ ನೋಡುತ್ತಿರಬೇಕು" ಎಂದು ಇನ್ನೊಮ್ಮೆ ಯೋಚಿಸಿದ.

ಹೀಗೆಯೇ ಎರಡು ತಿಂಗಳು ಉರುಳಿತು. ಅಷ್ಟರಲ್ಲಿ ಅನಿರೀಕ್ಷಿತವಾಗಿ ಪ್ರಯಾಗಿನಿಂದ ಒಂದು ಕಾಗದ ಬಂದಿತು—"ಶೈಲೇಶ ಒಬ್ಬ ವೈಷ್ಣವ ಸಾಧುವಿನಿಂದ ದೀಕ್ಷೆ ತೆಗೆದುಕೊಂಡಿದ್ದಾನೆ. ಮಗನಿಗೂ ವ್ರತಬಂಧ ಮಾಡಿಸಿದ್ದಾನೆ. ಪಿತಾಪುತ್ರರು ದಿನವೂ ಗಂಗಾಸ್ನಾನ ಮಾಡುತ್ತಾರೆ. ಮೀನು ಮಾಂಸ ತಿನ್ನುವುದಿರಲಿ; ಅದನ್ನು ಕೊಳ್ಳುವವರ ಓಣಿಯಲ್ಲಿ ಸಹ ಕಾಲಿಕ್ಕುವುದಿಲ್ಲ" ಎಂದು ಬರೆದಿತ್ತು ಆ ಕಾಗದದಲ್ಲಿ.

"ಈ ಹುಚ್ಚಾಟ ನಡೆಸಿದವರಾರು? ಯೋಗೇಶಬಾಬುವೇ?"—ವಿಭಾ ಕೇಳಿದಳು.

"ಹೌದು, ಯೋಗೇಶಬಾಬುವೇ ಇರಬೇಕು. ಆದರೆ ನನ್ನೊಡನೆ ಕಣ್ಣುಮುಚ್ಚಾಲೆಯಾಡುವಷ್ಟು ಅವನಿಗೆ ಸಲಿಗೆ ಇಲ್ಲ."

"ಏನೇ ಆದರೂ ಅವನು ನನ್ನಣ್ಣನ ಗೆಳೆಯ. ನಿಮ್ಮಲ್ಲಿ ಸಲಿಗೆಯಿಂದ ವ್ಯವಹರಿಸಿದರೂ ತಪ್ಪೇನಿಲ್ಲ. ಆದರೆ ಅವನು ಹೀಗೇಕೆ ಮಾಡಿರಬಹುದು? ಹುಂ, ಅಣ್ಣನಿಂದ ಅತ್ತಿಗೆಯ ಸುದ್ದಿಯನ್ನೆಲ್ಲ ಕೇಳಿ ತಿಳಿದುಕೊಂಡಿರಬೇಕು. ಅಲ್ಲದೆ ನೀವು ಒಬ್ಬರೇ ಉಷೆಯ ಬಗೆಗೆ ಸಹಾನುಭೂತಿಯುಳ್ಳವರೆಂದು ತಿಳಿದಿರಬೇಕು. ಆದ್ದರಿಂದಲೇ ನಿಮಗೆ ಹೀಗೆ ಬರೆದಿರಬೇಕು." ಹೀಗೆ ಹೇಳುವಷ್ಟರಲ್ಲಿ ಅವಳಿಗೇಕೋ ನಗು ಬಂದಿತು. ನಕ್ಕು ಅವಳು ತನ್ನ ಮಾತನ್ನು

ಹಾಗೆಯೇ ಮುಂದೆ ಸಾಗಿಸಿದಳು—“ ಇನ್ನು ಮುಂದೆ ಯಾವುದಾದರೂ ಕೇಸು ಆರಂಭಮಾಡುವುದಿದ್ದಾಗ ನನ್ನಿಂದ ಸ್ವಲ್ಪ ಬುದ್ಧಿಯನ್ನು ಎರವು ಪಡೆಯಿರಿ. ಎಂದರೆ ಈಗಿನಷ್ಟು ತೊಂದರೆ ಆಗಲಿಕ್ಕಿಲ್ಲ. ಉಮಾ, ಇಂದು ಕೊಂಚ ಬೇಗನೇ ಅಣಿಯಾಗು ನೋಡುವಾ. ಏಳು ಗಂಟೆಯೊಳಗೆ ಹೋಗಿ ತಲ್ಪದಿದ್ದರೆ ಲಾವಣ್ಯಳಿಗೆ ಸಿಟ್ಟು ಬಂದೀತು. ನೋಡು, ನಿನ್ನ ಅಣ್ಣನಿಗೆ ತುಸು ಬುದ್ಧಿ ಹೇಳಬಾರದೇ ? ಎಂದರೆ ದುಡ್ಡು ಕೊಟ್ಟವರಾದರೂ ಸುಮ್ಮನೆ ಇರುವ ಕಾಲ ಬಂದೀತು. ”

ಉಮೆ ನಗುನಗುತ್ತ ಹೊರಟುಹೋದಳು. ವಿಭೆಯು ಹೇಳಿದ ಕಾರಣ ಸರಿಯಿರಬಹುದೆಂದು ಅವಳು ಊಹಿಸಿದ್ದಳು.

ಈ ಘಟನೆ ನಡೆದ ೫-೬ ದಿನಗಳ ಮೇಲೆ ಕ್ಷೇತ್ರಮೋಹನ ದೊಡ್ಡದೊಂದು ಲಕೋಟೆಯನ್ನು ತಂದು ಹೆಂಡತಿಯ ಮುಂದೆ ಒಗೆದು—“ಇದನ್ನು ಬರೆದವರು ಯೋಗೇಶನ ತಂದೆ. ಅವರಿಗೆ ೭೦-೭೫ ವರ್ಷ ವಯಸ್ಸು. ಅವರು ನನ್ನನ್ನು ನೋಡಿಲ್ಲ. ನನಗೂ ಅವರನ್ನು ನೋಡಿದ ನೆನಪಿಲ್ಲ. ಒಮ್ಮೆನ್ಮೆ ನಮ್ಮಿಬ್ಬರ ನಡುವೆ ಪತ್ರವ್ಯವಹಾರವಾದುದುಂಟು. ಅವರು ಎಂಥವರೆಂದು ನನಗೆ ಗೊತ್ತಿರದಿದ್ದರೂ ನನ್ನೊಡನೆ ಅವರು ಹುಡುಗಾಟಿಕೆ ಮಾಡಲಾರರು ” ಎಂದ.

ಕಾಗದ ಬಹಳ ಉದ್ದವಿತ್ತು. ಅದು ಇಂಗ್ಲಿಷಿನಲ್ಲಿರಲಿಲ್ಲ, ಬಂಗಾಲಿಯಲ್ಲಿತ್ತು. ವಿಭೆ ಮೊದಲಿನಿಂದ ಕೊನೆಯ ವರೆಗೆ ಎರಡು ಸಲ ಓದಿ, “ ನಡೆದದ್ದಾದರೂ ಏನು ? ನೀವೇ ಒಂದೆರಡು ದಿನದ ಮಟ್ಟಿಗೆ ಹೋಗಿ ಬರಬಾರದೇ ? ” ಎಂದಳು.

“ ಆದರೆ ನನಗೆ ಬಿಡುವು ಎಲ್ಲಿದೆ ? ”

“ ಹೀಗೆಂದರೆ ಹೇಗೆ ? ಇಂತಹ ಸಂಕಟಕಾಲದಲ್ಲಿ ನಾವಲ್ಲದೆ ಅವನಿಗೆ ಇನ್ನಾರು ನೆರವಾಗಬೇಕು? ಈ ಕಾಗದದೊಳಗಿನ ಸಂಗತಿಯಲ್ಲಿ ಅರ್ಧವಾದರೂ ನಿಜವಾದರೆ ಪರಿಸ್ಥಿತಿ ಕೈಮೀರಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ”

ಕ್ಷೇತ್ರಮೋಹನ ತಲೆಯನ್ನಲ್ಲಾಡಿಸಿದ— “ ನಿನ್ನ ಮಾತೇನೋ ಸರಿ. ಆದರೆ ಹೇಗೆ ಹೋಗಲಿ ? ಹೋದರೂ ಸರಿಯಾದೀತೆಂದು ತೋರುವುದಿಲ್ಲವಲ್ಲ ! ”

ಪತಿಪತ್ನಿಯರಿಬ್ಬರೂ ಎಷ್ಟೋ ಹೊತ್ತಿನ ತನಕ ಮೌನವಾಗಿದ್ದರು. ಆ ಮೇಲೆ ಕ್ಷೇತ್ರಮೋಹನನೇ ಉದಾಸೀನನಾಗಿ ನುಡಿದ— “ ಶೈಲೇಶ ಮಾಡದೆ ಇದ್ದದ್ದು ಯಾವುದೂ ಇಲ್ಲ. ಅವನಲ್ಲಿ ಮಾನಸಿಕ ಸ್ಥಿರತೆಯೆಂಬುದು

ಎಳ್ಳಷ್ಟೂ ಇಲ್ಲ. ಅವನು ಬೇಕಾದರೆ ಹಾಳಾಗಿ ಹೋಗಲೊಲ್ಲನೇಕೆ ? ಆದರೆ ಸೋಮೇಂದ್ರನನ್ನೂ ಅದೇ ದಾರಿಗೇ ತಳ್ಳಬೇಕೆ ? ”

ವಿಭೆ ದುಃಖದಿಂದ ಕುಳಿತಿದ್ದಳು. ಅವಳು ಅಳಬಲ್ಲಳು, ಅಭಿಮಾನಪಡಬಲ್ಲಳು; ಆದರೆ ತನ್ನನ್ನು ವಂಚಿಸಿಕೊಳ್ಳಲಾರಳು. ಅವಳಿಗೆ ತನ್ನ ಈ ಗುಣಾವಗುಣಗಳ ಜ್ಞಾನವಿತ್ತು. ಕ್ಷೇತ್ರಮೋಹನ ಎಷ್ಟೋ ಹೊತ್ತಿನ ತನಕ ಮೌನವಾಗಿದ್ದ. ಆ ಮೇಲೆ ಹೆಂಡತಿಯನ್ನು ಕುರಿತು “ ವಿಭಾ, ನಿನ್ನಣ್ಣನಿಗೆ ಉಷೆಯಲ್ಲಿ ನಿಜವಾಗಿಯೂ ಪ್ರೇಮವಿದ್ದಿರಬೇಕು. ಅವನು ಸೋಮೇಂದ್ರನ ತಾಯಿಯನ್ನಾದರೂ ಇಷ್ಟು ಪ್ರೀತಿಸಿದ್ದನೋ ಇಲ್ಲವೋ ? ಆದ್ದರಿಂದಲೇ ಹೀಗಾಗಿರಬೇಕು ” ಎಂದ.

ಅವಳಿಗೆ ಸಿಟ್ಟು ಬಂದಿತು— “ ನನ್ನಣ್ಣ ದುರ್ಬಲ ಮನಸ್ಸಿನವನೆಂದು ಹೀಗೆಲ್ಲ ಹೇಳಬೇಡಿ. ಅವನು ಎಂದಿಗೂ ಹೀಗೆ ಬೇರೊಬ್ಬರ ಆರಾಧನೆ ನಡೆಸಲಾರ. ”

ಕೊನೆಗೆ ಹೆಂಡತಿಯ ಮಾತಿಗೆ ಕ್ಷೇತ್ರಮೋಹನ ಒಪ್ಪಿದ. ಅವನು ಇನ್ನಿತರ ಕೆಲಸಗಳನ್ನೆಲ್ಲ ಬದಿಗೊತ್ತಿ ಎರಡು ದಿನದಲ್ಲಿಯೇ ಪ್ರಯಾಗಿಗೆ ಹೋಗಿ ಬಂದ. ಅಲ್ಲಿ ಅವನು ನೋಡಿದ ಕತೆ ಹಾಸ್ಯಾಸ್ಪದದ್ದು. ಶೈಲೇಶ ಯೋಗೀಶನ ಮನೆಯ ಹತ್ತಿರವೇ ಇದ್ದ. ಆದರೆ ಕ್ಷೇತ್ರಮೋಹನನಿಗೆ ಅವನು ನೋಡಲು ಸಿಗಲಿಲ್ಲ. ಶೈಲೇಶ ತನ್ನ ಗುರುಗಳ ಪರಿವಾರದ ಜೊತೆಗೆ ವೃಂದಾವನಕ್ಕೆ ಹೋಗಿದ್ದ. ಸೋಮೇಂದ್ರನ ರೂಪು ನೈಷ್ಠಿಕ ಬ್ರಹ್ಮಚಾರಿಯದಾಗಿತ್ತು. ಅವನಿಗೆ ಬೆಳಗೂ ಬೈಗೂ ಸನಾತನಿಯೊಬ್ಬನಿಂದ ಧರ್ಮೋಪದೇಶ ನಡೆದಿತ್ತು. ಅವನು ತುಂಬಾ ಸೊರಗಿದ್ದ.

ಇದನ್ನೆಲ್ಲ ಕೇಳಿ ವಿಭೆಗೆ ದುಃಖ ಉಕ್ಕಿಬಂದಿತು—“ ಅವನನ್ನು ಕರೆದುಕೊಂಡಾದರೂ ಬರಬಾರದಿತ್ತೇ ? ” ಎಂದಳು.

“ ನನಗೂ ಆ ಯೋಚನೆ ಬಂದಿತ್ತು. ಆದರೆ ಶೈಲೇಶನಿಗೆ ಇನ್ನೂ ಸಿಟ್ಟು ಬರಬಹುದೆಂದು ಬಿಟ್ಟೆ. ”

“ ನಾನೂ ನಿಮ್ಮೊಡನೆ ಬಂದಿದ್ದರೆ ಚನ್ನಾಗಿತ್ತು ” ಎಂದು ಅವಳು ಉಸಿರ್ಗರೆದಳು.

ಶೈಲೇಶನಿಂದ ಕಾಗದವಿಲ್ಲದಿದ್ದರೂ ಆತನ ಸುದ್ದಿ ಪ್ರಚಾರವಾಗಲು ತಡೆಯಾಗಲಿಲ್ಲ. ಒಂದೆರಡು ಕಡೆ ಅವನ ಕತೆಯಲ್ಲಿ ಉಪ್ಪುಕಾರ ಬೆರೆತು ರುಚಿಕಟ್ಟಾಗಿ ಮಾರ್ಪಟ್ಟಿತ್ತು. ಭವಾನಿಪುರದವರಿಗೂ ಈ ಸುದ್ದಿ ಹೇಳಿ ಕಳಿಸುವ ಅವಶ್ಯಕತೆ ಉಂಟಾಗಲಿಲ್ಲ. ವಿಭೆ ಎಲ್ಲಿಯೂ ಮೋರೆ ಎತ್ತಿ ತಿರುಗು ವಂತಿರಲಿಲ್ಲ. ಗಂಡನ ಮುಂದೆ ಮಾತ್ರ "ಅಣ್ಣನೊಮ್ಮೆ ತಿರುಗಿ ಬರಲಿ, ನನ್ನ ಮುಂದೆ ಅವನ ಈ ಎಲ್ಲ ಆಟ ನಡೆಯಲಿಕ್ಕಿಲ್ಲ" ಎಂದು ಜಂಬಕೊಚ್ಚಿ ಕೊಳ್ಳುತ್ತಿದ್ದಳು.

ಈ ವಿಷಯದಲ್ಲಿ ಕ್ಷೇತ್ರಮೋಹನನಿಗೆ ಮಾತ್ರ ವಿಭೆಯೇ ಜಯಶಾಲಿ ಯಾದಾಳೆಂಬ ಧೈರ್ಯವಿರಲಿಲ್ಲ. ಆದರೂ ಶೈಲೇಶ ನಮ್ಮ ಸಮಾಜದಲ್ಲಿ ಬಂದರೆ ಈ ವೇಷ ಬಹಳ ದಿನ ತಡೆಯಲಿಕ್ಕಿಲ್ಲವೆಂದು ಅವನಿಗೆ ತೋರುತ್ತಿತ್ತು.

ಶೈಲೇಶ ಇನ್ನೂ ನಾಲ್ಕು ತಿಂಗಳು ರಜೆ ಬೆಳೆಸಿದ. ಈಗ ಅದರಲ್ಲಿ ಎರಡು ತಿಂಗಳು ಕಳೆದಿತ್ತು. ಅವನು ಅಲ್ಲಿದ್ದು ಬೇಕಾದಷ್ಟು ಸ್ನಾನಮಾಡಲಿ, ತ್ರಿಪುಂಡ್ರ ಹಚ್ಚಿಕೊಳ್ಳಲಿ; ಆದರೆ ನೌಕರಿ ಮಾತ್ರ ಬಿಡಲಾರನೆಂದು ಕ್ಷೇತ್ರ ಮೋಹನ ನಂಬಿದ್ದ. ಆದ್ದರಿಂದ ಅವನು ಬಂದಮೇಲೆ ನೋಡಿಕೊಂಡರಾಯಿ ತೆಂದು ಕ್ಷೇತ್ರಮೋಹನ ದಿನಹರಣ ಮಾಡುತ್ತಿದ್ದ.

ಒಮ್ಮೆ ಚಹಾಪಾನ ಮಾಡುತ್ತಿದ್ದಾಗ "ಈಗ ಉಷೆ ಶೈಲೇಂದ್ರನ ಸಹಧರ್ಮಿಣಿಯಾದಂತಾಯಿತು. ಆದ್ದರಿಂದ ಅವರಿಬ್ಬರೂ ಜಗಳಾಡುವ ಪ್ರಮೇಯವಿಲ್ಲ" ಎಂದು ಕ್ಷೇತ್ರಮೋಹನ ಮಾತಿಗೆ ಆರಂಭಿಸಿದ.

"ಅವಳು ಬರುವ ಸುದ್ದಿಯೇನಾದರೂ ಇದೆಯೇ?"

"ಇಲ್ಲ."

"ಹಳ್ಳಿಗಳಲ್ಲೆಲ್ಲ ಮೋಡಿ ಮಾಡುತ್ತಾರಂತೆ. ಅದರಲ್ಲಿ ನಿಮಗೆ ವಿಶ್ವಾಸವಿದೆಯೇ?"

"ಉಹುಂ. ಇದ್ದರೂ ಅವುಗಳಿಂದ ಹೀಗೆಲ್ಲ ಮಾಡಲು ಬಾರದು."

"ಅದೇನು?"

"ಅಕ್ಕನ ಬಗೆಗೆ ನನಗೆ ಹಿಂದಿನ ಆದರ ಉಳಿದಿಲ್ಲವಾದರೂ ಇಂತಹ ಕುತ್ಸಿತ ಮಾರ್ಗಗಳನ್ನು ಅವಳು ಅನುಸರಿಸುವಳೆಂದು ನಾನು ನಂಬಲಾರೆ."

“ ಏನೇ ಆಗಲಿ. ಆ ಹುಡುಗನನ್ನು ಮಾತ್ರ ಅಲ್ಲಿಂದ ತರಲೇಬೇಕು ” ಎಂದಳು ವಿಭೆ.

ಅಷ್ಟರಲ್ಲಿ ಶೈಲೇಶನ ಮನೆಯ ಆಳು ಜಮುಖಾನು ಕೇಳಲು ಬಂದ. ಶೈಲೇಶನ ಜೊತೆಗೆ ಇನ್ನೂ ಮೂರು ನಾಲ್ಕು ಜನ ಸಾಧುಸಂತರು ಬಂದಿದ್ದಾರೆಂದು ಅವನಿಂದ ತಿಳಿಯಿತು. ಜಮುಖಾನು ತೆಗೆದುಕೊಂಡು ಆಳು ಹೊರಟು ಹೋದ. ಆ ದಿನ ತಡೆದು ಮಾರನೇ ದಿನ ಎಲ್ಲರೂ ಶೈಲೇಶನ ಮನೆಗೆ ಹೋದರು.

ಅವರೆಲ್ಲರೂ ಒಮ್ಮೆಲೇ ಶೈಲೇಶನ ಓದುವ ಕೋಣೆಯನ್ನು ಪ್ರವೇಶಿಸುವವರಿದ್ದರು. ಆದರೆ ಅಲ್ಲಿಯ ಭಾವಭಂಗಿಯನ್ನೆಲ್ಲ ನೋಡಿ ದಂಗುಬಡೆದು ನಿಂತರು. ಬಾಗಿಲಿಗೆ ಇಳಿಬಿಟ್ಟಿದ್ದ ಪರದೆ ಇರಲಿಲ್ಲ. ಒಂದು ಕಪಾಟಿದ್ದರೂ ಅದರಲ್ಲಿ ಯಾವ ವಸ್ತುವೂ ಇರಲಿಲ್ಲ. ನೆಲದ ಮೇಲೆ ಜಮುಖಾನು ಹಾಸಿ ಇಬ್ಬರು ಕುಳಿತಿದ್ದರು. ಅವರ ಮೈತುಂಬ ಹರಿಮುದ್ರೆ. ಕುತ್ತಿಗೆಯಲ್ಲಿ ದಪ್ಪನಾದ ಜಪಮಣಿಗಳ ಒಂದು ಮಾಲೆ. ಹೊರಗೆ ಬಂದ ಆಗಂತುಕ ಸಾಹೇಬರನ್ನು ಕಂಡು ಆ ಸಾಧುಗಳಿಗೆ ದಿಗಿಲಾಯಿತು. ಬಂದವರು ಮೇಲೆ, ಮಾಳಿಗೆಗೆ ಹೋಗೋಣವೆಂದು ಯೋಚಿಸಿದ್ದರು. ಆದರೆ ಅಡಿಗೆಯವನು, ಮೇಲಿನ ಕೋಣೆಯಲ್ಲಿ ಗುರುಗಳಿದ್ದಾರೆಂದು ಅವರನ್ನು ತಡೆದನು.

“ ಯಾರೋ ಗುರುಗಳು ? ”

ಅಡಿಗೆಯವನು ಉತ್ತರ ಕೊಡಲಿಲ್ಲ.

“ ಸಾಹೇಬರೆಲ್ಲಿ ? ”

ಬೆರಳಿನಿಂದ ಮೇಲಕ್ಕೆ ತೋರಿಸಿದ. ಕ್ಷೇತ್ರಮೋಹನನು “ ಶೈಲೇಶ, ಶೈಲೇಶ ” ಎಂದು ಕೂಗಿದ. ಸೋಮೇಂದ್ರ ಓಡಿ ಬಂದ. ಆತನ ರೀತಿನೀತಿಯನ್ನು ಕಂಡು ವಿಭೆಗೆ ಅಳು ಬಂದಿತು. ಅವನು ಬಿಳಿಯ ಪಂಚೆಯನ್ನುಟ್ಟಿದ್ದ. ಹಣೆಗೆ ನಾಮ. ಕುತ್ತಿಗೆಗೆ ಜಪಸರ. ಅವನು ಹತ್ತಿರ ಬರದೆ ದೂರದಿಂದಲೇ ನಮಸ್ಕರಿಸಿದ. ಉಮೆ ಅವನನ್ನು ಹಿಡಿಯಲು ಬಯಸಿದಳು. ಆದರೆ ಅಣ್ಣ ಬೇಡವೆಂದದ್ದರಿಂದ ಸುಮ್ಮನಾದಳು. ಕ್ಷೇತ್ರಮೋಹನ “ ಸೋಮೇಂದ್ರ, ನಿನ್ನ ತಂದೆಯೆಲ್ಲಿ ? ” ಎಂದು ಕೇಳಿದ.

“ ಗುರುವಿನ ಬಳಿ ಭಾಗವತ ಓದುತ್ತಿದ್ದಾರೆ. ”

“ ಅವರಿಗೆ ನಾವು ಬಂದಿದ್ದೇವೆಂದು ಹೇಳು. ”

" ನೀವು ಬಂದುದು ಅವರಿಗೆ ಗೊತ್ತಿದೆ. ಅವರು ಈಗ ಬರಬಹುದು. "

ಕೆಲ ಹೊತ್ತಿನಲ್ಲಿಯೇ ಪಾದುಕೆಗಳನ್ನು ಧರಿಸಿದ ಶೈಲೇಶ ಕೆಳಗಿಳಿದು ಬಂದ. ಅವನ ಉಡುಪು ಸಾದಾ ಧೋತರ, ಶರ್ಟು. ತಲೆಯ ಮೇಲೆ ತುಸು ಚಂಡಿಕೆ. ಬಹಿರಂಗದಲ್ಲಿ ಯಾವುದೇ ಬದಲಾವಣೆ ಕಂಡುಬರದಿದ್ದರೂ ಅಂತರಂಗದಲ್ಲಿನ ಬದಲಾವಣೆ ಮಾತ್ರ ಎದ್ದು ಕಾಣುತ್ತಿತ್ತು. ಈಗ ಅವನು ತುಂಬಾ ವಿನಯಿ, ಮಧುರಭಾಷಿ. ವಿಭೆ ಉಮೆಯರು ನಮಸ್ಕರಿಸಿದೊಡನೆಯೇ ಹರಸಿದ. ಅವರನ್ನು ಮುಟ್ಟಲು ಹತ್ತಿರ ಬರಲಿಲ್ಲ.

" ಅಣ್ಣಾ, ಮನೆಯಲ್ಲಿ ಕುಳ್ಳಿರಲು ಸ್ಥಳವಿಲ್ಲವೇ ? "

" ಹೊರಗಿನ ಕೋಣೆ ಹೊಲಸಾಗಿದೆ. ಚೊಕ್ಕಟ ಮಾಡಿಸಬೇಕು. "

" ಹಾಗಾದರೆ ಈಗ ಹೋಗುತ್ತೇವೆ. ಇನ್ನು ಮುಂದೆ ಇಲ್ಲಿ ನಮ್ಮ ಅವಶ್ಯಕತೆಯಿದ್ದಂತೆ ತೋರುವುದಿಲ್ಲ. ಆದರೂ ಕುಳಿತುಕೊಳ್ಳಲು ಅನುಕೂಲ ಮಾಡಿಸಿದಾಗ ಹೇಳಿ ಕಳುಹಿಸು, ಬರುವೆವು. "

ಶೈಲೇಶ ಏನೂ ಮಾತಾಡಲಿಲ್ಲ.

ದಾರಿಯಲ್ಲಿ ವಿಭೆ ಒಂದು ಮಾತನ್ನೂ ಆಡಲಿಲ್ಲ. ಆದರೆ ಅವಳ ಎರಡೂ ಕಣ್ಣುಗಳಿಂದ ಅವಿರತವಾಗಿ ನೀರು ಸುರಿಯುತ್ತಿತ್ತು. ತಮಗೆ ಇನ್ನು ಈ ಮನೆಯಲ್ಲಿ ಸ್ಥಳವಿಲ್ಲವೆಂದು ಎಲ್ಲರಿಗೂ ತೋರಿತು. ಏನೇ ಆದರೂ ಸೋಮೇಂದ್ರನನ್ನು ಬಿಟ್ಟು ಬರುವುದಿಲ್ಲವೆಂದು ಅವಳು ಗಂಡನೊಡನೆ ಆಣೆ ಮಾಡಿದ್ದಳು. ಈ ಮಾತು ಇಬ್ಬರಿಗೂ ನೆನಪಾಗುತ್ತಿದ್ದರೂ ಪರಿಸ್ಥಿತಿಯನ್ನರಿತು ಯಾರ ಬಾಯಿಂದಲೂ ಈ ಮಾತು ಹೊರಬೀಳಲಿಲ್ಲ.

ಒಂದು ತಿಂಗಳು ಗತಿಸಿತು. ಶೈಲೇಶನ ಸುದ್ದಿ ಊರಲ್ಲೆಲ್ಲ ಹಬ್ಬಿತು. ಈ ಸಂಗತಿ ಹೇಳುತ್ತ ಹೋದವರೆಲ್ಲ ಅದರಲ್ಲಿ ಉಪ್ಪುಕಾರ ಸೇರಿಸಲು ಮರೆಯುತ್ತಿರಲಿಲ್ಲ. ವಿಭೆಗೆ ಎಲ್ಲಿಯೂ ತಲೆಯೆತ್ತಿ ತಿರುಗಲು ಇಂಬಿಲ್ಲದಂತಾಗಿದೆ. ಪರಿಸ್ಥಿತಿ ಸುಧಾರಿಸುವ ಆಸೆ ಅವಳಿಗಿಲ್ಲ. ಉದ್ರೇಕಗೊಂಡವರ ಮನಸ್ಸು ಕಾಲ ಕಳೆದಂತೆ ಶಾಂತವಾಗುತ್ತದೆಂದು ಕ್ಷೇತ್ರಮೋಹನ ಅರಿತಿದ್ದ. ಅದಕ್ಕಾಗಿ ಅನುಕೂಲ ಸಮಯ ಬರಲಿ ಎಂದು ಕಾದಿದ್ದ. " ಮನುಷ್ಯನು ಪರಲೋಕದ ಸುಧಾರಣೆಗೆ ಒಮ್ಮೆಲೇ ತೊಡಗಿದನೆಂದರೆ ದಾರಿಗೆ ಬರುವುದು ಕಷ್ಟ. ಅಲ್ಲದೆ ಅವನು ಈ ದಾರಿ ಹಿಡಿದದ್ದು ಉಷೆಯ ಕಾಲಗುಣದಿಂದ. ಈಗ ಅವಳೂ ಬಂದು ಸೇರಿದಳೆಂದರೆ ಗಾಳಿ ಬೆಂಕಿ ಸೇರಿದಂತೆ " ಎಂದ.

ಉಷೆಯ ಬಗೆಗೆ ಈಗ ಎಲ್ಲರಿಗೂ ಸಿಟ್ಟು. ಅವಳು ಬರದಿದ್ದರೆ ಈ ಎಲ್ಲ ಉಪದ್ವ್ಯಾಪವಾಗುತ್ತಿರಲಿಲ್ಲ ಎಂದು ಅವರ ಭಾವನೆ.

ಅಂದು ರವಿವಾರ. ಗಂಡ ಹೆಂಡತಿ—ಕ್ಷೇತ್ರಮೋಹನ ಮತ್ತು ವಿಭೆ—ಇಬ್ಬರೂ ಶೈಲೇಶನನ್ನು ಕುರಿತೇ ಮಾತುಕತೆ ನಡೆಸಿದ್ದರು. ಶೈಲೇಶನ ಮನೆಯಿಂದ ಅಪಮಾನಿತರಾಗಿ ತಿರುಗಿ ಬಂದಂದಿನಿಂದ ಅವರು ಅತ್ತ ಕಣ್ಣೆತ್ತಿಯೂ ನೋಡಿರಲಿಲ್ಲ. ಆದರೆ ಅಲ್ಲಿಯ ದಿನದಿನದ ಸಮಾಚಾರ ಅವರ ಕಿವಿಗೆ ಬೀಳುತ್ತಿತ್ತು. ಗುರು ಶಿಷ್ಯರು ಅಲ್ಲಿಂದ ಹೊರಡುವ ಲಕ್ಷಣವಿದ್ದಿಲ್ಲ. ಗುರುಗಳ ಗದ್ದುಗೆ ಯಾವಾಗಲೂ ಮಾಳಿಗೆಯ ಮೇಲೆಯೇ. ಸಾಯಂ-ಪ್ರಾತಃಕಾಲಗಳಲ್ಲಿ ನಿಯಮಿತವಾಗಿ ಹರಿಕೀರ್ತನೆ ನಡೆಯುತ್ತಿತ್ತು. ಅಲ್ಲದೆ ಗೆಳೆಯರಿಂದ ಇಂದು ಒಂದು ಹೊಸ ಸಮಾಚಾರ ಕಿವಿಗೆ ಬಿದ್ದಿತು. ಶೈಲೇಶ ಶ್ರೀಧಾಮ ನವದ್ವೀಪದಲ್ಲಿ ಬಹಳ ವೆಚ್ಚ ಮಾಡಿ ಗುರುಗಳಿಗೆ ಆಶ್ರಮ ಕಟ್ಟಿಸುತ್ತಿದ್ದಾನೆಂದೂ ಅದಕ್ಕಾಗಿ ಸಾಲ ಮಾಡುವವನಿದ್ದಾನೆಂದೂ ತಿಳಿದು ಬಂದಿತ್ತು.

“ ಈ ಸುದ್ದಿ ನಿಜವಾದರೆ ಅಣ್ಣನ ಉದ್ಧಾರಕ್ಕಾಗಿ ಇನ್ನೊಮ್ಮೆ ಯತ್ನಿಸಿ. ವೃಥಾ ಆ ಹುಡುಗ ಹಾಳಾಗಬೇಕಾದೀತು. ”

“ ಅಯ್ಯೋ ! ನಾನಾದರೂ ಏನು ಮಾಡಲಿ? ಹಾಗಾದರೆ ಇಂದು ಒಮ್ಮೆ ಅತ್ತ ಹೋಗಿ ಬರೋಣ. ”

ವಿಭೆಗೆ ಇಂದು ನಿಜವಾಗಿಯೂ ಅಳು ಬಂದುಬಿಟ್ಟಿತ್ತು. ಈ ದುಃಖದ ನೆರೆಯಲ್ಲಿ ಅವಳ ಮಾನ-ಅಭಿಮಾನಗಳೆಲ್ಲ ತೇಲಿಹೋಗಿದ್ದವು. ಅವಳು “ ಹಾಗೇ ಆಗಲಿ ” ಎಂದಳು.

ಅವರು ಇಂದು ಉಮೆಯನ್ನು ಕರೆದುಕೊಂಡು ಹೋಗಲಿಲ್ಲ. ಅವಳ ಎದುರು ಇನ್ನೊಮ್ಮೆ ನಾಚಿಕೆಗೇಡಾಗುವ ಸಂದರ್ಭ ಬರಬಾರದೆಂದು ಹಾಗೆ ಮಾಡಿದ್ದರು. ಶೈಲೇಶನ ಮನೆಯ ಎದುರು ಮೋಟರು ಹೋಗಿ ನಿಂತಾಗ ಹತ್ತು ಗಂಟೆ. ಹೊರಗಿನ ಕೋಣೆ ತೆರೆದಿತ್ತು. ಇಬ್ಬರೂ ಶಿಷ್ಯರು ನೆಲದ ಮೇಲೆ ಕುಳಿತು ಗಂಟು ಮೂಟೆ ಕಟ್ಟುತ್ತಿದ್ದರು.

“ ಶೈಲೇಶಬಾಬು ಮನೆಯಲ್ಲಿದ್ದಾರೆಯೇ ? ”

“ ಇಲ್ಲ. ಮೊನ್ನೆ ಅವರು ನವದ್ವೀಪಕ್ಕೆ ಹೋಗಿದ್ದಾರೆ. ”

“ ತಿರುಗಿ ಎಂದು ಬರುವರು ? ”

" ನಾಳೆ ಅಥವಾ ನಾಡದ್ದು ಬೆಳಿಗ್ಗೆ. "

" ಸೋಮೇಂದ್ರ ಮನೆಯಲ್ಲಿದ್ದಾನೆಯೇ ? "

" ಹೂಂ " ಎಂದು ತಮ್ಮ ಕೆಲಸದಲ್ಲಿ ಮಗ್ನರಾದರು ಅವರು.

ಆ ಮೇಲೆ ವಿಭಾ ಕ್ಷೇತ್ರಮೋಹನರು ಮನೆಯನ್ನು ಪ್ರವೇಶಿಸಿದರು. ಇಬ್ಬರೂ ಲೈಬ್ರರಿ ಕೋಣೆಯೆಡೆಗೆ ನೋಡಿದರು. ಎಂದಿನಂತೆ ಪರದೆ ಇತ್ತು. ಸಾಮಾನೆಲ್ಲ ವ್ಯವಸ್ಥಿತವಾಗಿ ಇಡಲ್ಪಟ್ಟಿತ್ತು. ಇದನ್ನೆಲ್ಲ ನೋಡಿ, ವಿಭೆಯು " ಅಣ್ಣನು ಅವರಿಬ್ಬರನ್ನೂ ಹೊರಹಾಕಿ ಕೋಣೆಯನ್ನು ಸ್ವಚ್ಛಗೊಳಿಸಿ ದಂತಿದೆ. ಇಷ್ಟಾದರೂ ಆತನಿಗೆ ಬುದ್ಧಿ ಬಂದೀತೆಂದು ಭಾವಿಸಿರಲಿಲ್ಲ " ಎನ್ನುವಷ್ಟರಲ್ಲಿಯೇ ಹಿಂದಿನಿಂದ ಒಂದು ಶಬ್ದವನ್ನು ಕೇಳಿ ಅವರೆಲ್ಲ ಚಕಿತ ರಾಗಿ ನಿಂತರು.

ಎಲ್ಲಿಯೋ ಹೊರಗೆ ಹೋಗಿದ್ದ ಸೋಮೇಂದ್ರ ರಬ್ಬರಿನ ಚಂಡೊಂದನ್ನು ಹಾರಿಸುತ್ತ ಬರುತ್ತಿದ್ದ. ಕೊರಳಿಗೆ ಮಾಲೆ ಇರಲಿಲ್ಲ. ಹಿಂದಿನ ವೇಷವೂ ಇರಲಿಲ್ಲ. ಬ್ರಹ್ಮಚಾರಿಯ ರೂಪವೂ ಮಾಯವಾಗಿತ್ತು. ಅವನು ಕೆಂಪು ಅಂಚಿನ ಪಂಚೆ ಉಟ್ಟಿದ್ದ. ಅದಕ್ಕೆ ಜರದ ನಕ್ಷೆ ಇತ್ತು. ತಲೆಯ ಕೂದಲನ್ನು ವ್ಯವಸ್ಥಿತವಾಗಿ ಕತ್ತರಿಸಿದ್ದರು. ಕಾಲಿಗೆ ವಾರ್ನಿಶ್ ಮಾಡಿದ ಮೆಟ್ಟು ಇತ್ತು. ಅವನು ಓಡುತ್ತ ಓಡುತ್ತ ಬಂದು ವಿಭೆಯನ್ನು ಅಪ್ಪಿಕೊಂಡ. " ಅತ್ತೇ, ಅಮ್ಮ ಬಂದಿದ್ದಾಳೆ. ಅಡಿಗೆಯ ಮನೆಯಲ್ಲಿದ್ದಾಳೆ " ಎಂದು ಸೀರೆಯ ನಿರಿಗೆ ಹಿಡಿದು ಎಳೆಯತೊಡಗಿದ.

ಮೂವರೂ ಅಡಿಗೆಯ ಮನೆಯ ಹತ್ತಿರ ಬಂದರು. ಅವರು ಬಂದು ದನ್ನು ನೋಡಿ ಉಷೆ ಕೈತೊಳೆದು ಹೊರಗೆ ಬಂದಳು. ಅವಳನ್ನು ಕಂಡೊಡ ನೆಯೇ ವಿಭೆ ಕಾಲಿನಿಂದ ಚಪ್ಪಲಿ ತೆಗೆಯುತ್ತ " ಅತ್ತಿಗೇ, ನೋಡಿದೆಯಾ ? ಏನು ಗತಿಯಾಯಿತು ? " ಎಂದಳು.

ಉಷೆ ವಿಭೆಯು ಗದ್ದವನ್ನು ಮುಟ್ಟಿ ಚುಂಬಿಸಿದಳು. " ನೋಡಿದೆಯಾ, ಮಗುವಿನ ಮೋರೆ ಕಂಡು ನನಗಂತೂ ಅಳು ಬಂದಿತು. ಮಾಲೆ ಹರಿದೊಗೆದೆ. ಕ್ಷೌರ ಮಾಡಿಸಿ, ಪಂಚೆ, ಅಂಗಿ, ಕಾಲ್ಮರೆ ತೊಡಿಸಿದೆ. ಆದ್ದರಿಂದ ಇಷ್ಟಾ ದರೂ ನೋಡುವಾ ಎನಿಸುತ್ತದೆ. ಇರಲಿ. ನೀವೇನು ಮಾಡಿದಿರಿ ? " ಎಂದು ಕ್ಷೇತ್ರಮೋಹನನ ಕಡೆಗೆ ನೋಡಿ ಕೇಳಿದಳು.

" ಸಾವಕಾಶವಾಗಿ ಎಲ್ಲವನ್ನೂ ಹೇಳುತ್ತೇನೆ. ಅದಕ್ಕೆ ಇಷ್ಟೇಕೆ ಆತುರ ?

ಮೊದಲು ಮೇಲೆ ಹೋಗಿ ಏನಾದರೂ ತಿನ್ನಲು ಕೊಡು. ಅಕೋ, ಶಿಷ್ಯರಿಬ್ಬರು ಹೊರಗೆ ಗಂಟುಕಟ್ಟುತ್ತಿದ್ದಾರೆ. ಮೇಲೆ ಗುರುಗಳು ಇಲ್ಲವಷ್ಟೆ ?"

ಉಷೆ ನಗುತ್ತ, "ಏನೂ ಹೆದರುವ ಕಾರಣವಿಲ್ಲ. ಅವರೆಲ್ಲ ನವದ್ವೀಪಕ್ಕೆ ತೆರಳಿದ್ದಾರೆ" ಎಂದಳು.

"ಹಾಗಾದರೆ ಅವರೆಂದೂ ತಿರುಗಿ ಬರಲಾರರೇ ?"

"ಇಲ್ಲ."

"ಅಕ್ಕ, ನಿನಗೆ ಇಷ್ಟು ಸುಬುದ್ಧಿಯಿದೆಯೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ."

---

ಸಂಯುಕ್ತ ಕರ್ನಾಟಕ ಮುದ್ರಣಾಲಯ, ಹುಬ್ಬಳ್ಳಿ ೨೫೨೧-೫೪-೧೦೦೦

# ಕೆಲವು ಸಂಗ್ರಾಹ್ಯ ಗ್ರಂಥಗಳು

| | | |
|---|---|---|
| ಆರ್ಯಧರ್ಮ ಪ್ರದೀಪ | ಹೊಸಕೆರೆ ಚಿದಂಬರಯ್ಯ | ೮—೦—೦ |
| ಅಕ್ಕ ತಂಗಿ | ಶ್ರೀ. ನಾರಾಯಣ ಸಂಗಮ | ೨—೮—೦ |
| ಸಂಸಾರ ಚಿತ್ರ | ಆನಂದ ಕಂದ | ೨—೪—೦ |
| ಸಂಪಿಗೆ | ಶ್ರೀ. ಕುಲಕರ್ಣಿ ಶ್ರೀನಿವಾಸ | ೦-೧೦—೦ |
| ಚಂದ್ರನಾಥ | ಶರಚ್ಚಂದ್ರ ಚಟರ್ಜಿ | ೧—೪—೦ |
| ನವವಿಧಾನ | ,, ,, | ೦-೧೨—೦ |
| ಬಾಳಿನ ಗಿಡ | ಎಂ. ಹರಿದಾಸರಾಯರು | ೨—೮—೦ |
| ನನ್ನ ಆರಂಭ ಜೀವನ | ಗಾಂಧೀಜಿ | ೧—೮—೦ |
| ಮಗಳಿಗೆ ತಂದೆಯು ಓಲೆಗಳು | ಪಂ. ನೆಹರು | ೧-೧೨—೦ |
| ಕರ್ಮಯೋಗ | ಸ್ವಾಮಿ ವಿವೇಕಾನಂದ | ೧-೧೨—೦ |
| ಗಾಂಧೀ ವಿಚಾರದೋಹನ | ಮಶ್ರೂವಾಲಾ | ೩—೦—೦ |
| ಕ್ರಾಂತಿಪಥದಲ್ಲಿ | ಜಯಪ್ರಕಾಶ ನಾರಾಯಣ | ೩—೮—೦ |
| ಸಾಮ್ಯವಾದವೇ ಏಕೆ | ,, ,, | ೦-೧೦—೦ |
| ಮಂಗಲಪ್ರಭಾತ | ಗಾಂಧೀಜಿ | ೦-೧೨—೦ |

ಪ್ರಕಾಶಕರು :

ಸಾಹಿತ್ಯ ಭಂಡಾರ, ಹುಬ್ಬಳ್ಳಿ